KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಫೆಬ್ರವರಿ ೨, ೨೦೦೬ (ಮಾಘ ೧೩, ಶಕ ವರ್ಷ ೧೯೨೭) | ಸಂಚಿಕೆ ೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಬಿ.ಗಿರೀಶ್, ಹಿಂದಿನ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಚಾಮರಾಜನಗರ ಹಾಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಉಡುಪಿರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಾರ್ಪಾಡಿನ ಮಂಜೂರಾತಿ ಆದೇಶ ಕುರಿತು.

**ಓದಲಾಗಿದೆ:**

1) ಎಡಿಜಿಪಿ/ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ/ಪಿಎನ್ ವಿ(ಜಿ)/ ಎಂ20/ಸಿಆರ್/6/2000, ಎಂವೈಎಸ್, ದಿನಾಂಕ:06.09.2000
2) ಲೋಕ/ಐಎನ್ವಿ(ಜಿ)/ಎಂ20/ಸಿಆರ್/6/2000/ಎಂವೈಎಸ್ ದಿನಾಂಕ:30.04.2001ರ ಪತ್ರವು ಎಡಿಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಂದ ಬಂದಿದೆ.
3) ಲೋಕ/ತನಿಖೆ/(ಜಿ)/ಎಂ20/ಸಿಆರ್/6/2000/ಎಂವೈಎಸ್ ದಿನಾಂಕ:24.07.2003ರ ಪತ್ರವು ಎಡಿಜಿಪಿ, ಬೆಂಗಳೂರು ಇವರಿಂದ ಬಂದಿದೆ.
4) ತನಿಖಾಧಿಕಾರಿಯ ವರದಿ ಸಂಖ್ಯೆ: ಚಾನ/ಮೊವಿ/ಲೋಠಾಣೆ/ಪೊ/ನಂ/6/2000 ಎಂವೈಎಸ್ ದಿನಾಂಕ:19.06.2003
5) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮ, ಜಪ್ತಿ ಪಂಚನಾಮ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರಿಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
6) ಸರ್ಕಾರಿ ಆದೇಶ ಸಂಖ್ಯೆ:ಸಕ ಇ 343 ಬಿಇಟಿ 2000,ದಿನಾಂಕ:07.07.2005
7) ಲೋಕ/ತನಿಖೆ/ಎಂ-20/ಸಿಆರ್-6/2000, ಮೈಸೂರು, ದಿನಾಂಕ:20.07.2005, ಎಡಿಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಂದ ಬಂದಿದೆ.

**ಪ್ರಕರಣದ ಸಾರಾಂಶ:**

ಶ್ರೀ ಬಿ.ಗಿರೀಶ್, ಹಿಂದಿನ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಚಾಮರಾಜನಗರ ಇವರ ವಿರುದ್ಧ ಗುನ್ನೆ ಸಂಖ್ಯೆ:6/2000ರಲ್ಲಿ ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು(ಸ್ಥಳ) ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 4,5) ಮಾನ್ಯ ಹೆಚ್ಚುವರಿ/ಪೋಲೀಸ್ ಮಹಾ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ:06.09.2000ರ ಪತ್ರಗಳೊಡನೆ ಕಳುಹಿಸುತ್ತಾ, ಆಪಾದಿತನನ್ನು ತಕ್ಷಣ ಅಮಾನತ್ತಿನಲ್ಲಿರಿಸಲು ರಾಜ್ಯ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ. ಸದರಿ ವರದಿಯನ್ವಯ ಆಪಾದಿತ ಅಧಿಕಾರಿಯನ್ನು ದಿನಾಂಕ: 30.09.2000ರಲ್ಲಿ ಅಮಾನತ್ತಿನಲ್ಲಿರಿಸಿದೆ. ತದನಂತರ ಲೋಕಾಯುಕ್ತ ಕಛೇರಿಯ ಶಿಫಾರಸ್ಸಿನ ಮೇರೆಗೆ ದಿನಾಂಕ:28.05.2001ರ ಆದೇಶದಲ್ಲಿ ವಿಚಾರಣೆಗೆ ಬಾಕಿ ಇರಿಸಿ, ಸೇವೆಗೆ ಪುನರ್ ಸ್ಥಾಪಿಸಿದೆ.

2. ಸಕ್ಷಮ ಪ್ರಾಧಿಕಾರಿಯಾದ ರಾಜ್ಯ ಸರ್ಕಾರವು ಎಡಿಜಿಪಿ ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಹೆಸರಿಸಲಾದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ:30.04.2001ರ ಪತ್ರದಲ್ಲಿ ದಾಖಲೆ ದಸ್ತಾವೇಜುಗಳನ್ನು ಸರ್ಕಾರಕ್ಕೆ ಸಲ್ಲಿಸಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸೂಕ್ತ ಆದೇಶ ಜಾರಿ ಮಾಡಲು ಶಿಫಾರಸ್ಸು ಮಾಡಿರುವರು ಹಾಗೂ ಸದರಿ ಪತ್ರದಲ್ಲಿ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲೆ/ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಮುಂದುವರೆದು ದಿನಾಂಕ:24.07.2003ರ ಪತ್ರದಲ್ಲಿ ನಿಗದಿತ ನಮೂನೆಯಲ್ಲಿ ಅಭಿಯೋಜನಾ ಮಂಜೂರಾತಿ ಮಾಡಲು ಪ್ರಸ್ತಾಪಿಸಿರುವರು. ಪರಿಶೀಲಿಸಲಾದ ದಾಖಲೆ/ದಸ್ತಾವೇಜುಗಳು ಈ ಕೆಳಕಂಡಂತೆ ಇರುವುವು.

(ಅ) ಶ್ರೀ ಕೃಷ್ಣಪ್ಪ, ತಂದೆ ಅರುಣಾಚಲ ಗೌಂಡರ್, ಚಾಮರಾಜನಗರ ತಾಲ್ಲೂಕು, ಹೊನ್ನವಳ್ಳಿ ಪೋಸ್ಟ್, ಯಲಚಗೆರೆ ತೋಟ ರವರ ಫಿರ್ಯಾದಿ, ದಿನಾಂಕ:24.07.2000.

(ಆ) ಪ್ರಥಮ ವರ್ತಮಾನ ವರದಿ ಮೈ/ಪಿಡಬ್ಲ್ಯೂ/ಕೆಎಲ್ ಎ/ಪಿಎಸ್/ಸಿಆರ್/6/2000 ಐಎನ್ ವಿ(ಜಿ)/ಎಂ20/ ಸಿಆರ್/6/2000, ದಿನಾಂಕ:24.07.2000

(ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ:24.07.2000

(ಈ) ಟ್ರ್ಯಾಪ್ ಮಹಜರ್ ದಿನಾಂಕ:24.07.2000

(ಉ) ರಾಸಾಯನಿಕ ಪರಿಕ್ಷಕರ ಪರೀಕ್ಷಣಾ ವರದಿ ಸಂಖ್ಯೆ/CME/EX/LOK/45/2000-01 ದಿನಾಂಕ: 27.07.2000

(ಊ) ಕೃತ್ಯ ನಡೆದ ಸ್ಥಳದ ನಕಾಶೆ:ವರದಿಯಲ್ಲಿರುವಂತೆ.

(ಋ) ಸಾಕ್ಷಿಗಳ ಹೇಳಿಕೆಗಳು. (ಸಾಕ್ಷಿಗಳ ಹೆಸರುಗಳ ಪಟ್ಟಿ) ವರದಿಯಲ್ಲಿರುವಂತೆ.

| | | |
|---|---|---|
| 1 | ಶ್ರೀ ಎನ್.ಕೃಷ್ಣಮೂರ್ತಿ, ಸಿ.ಹೆಚ್.ಸಿ., ಪಿ.ಡಬ್ಲ್ಯೂ. ಕೆ.ಎಲ್.ಎ., ಮೈಸೂರು. | ದಿನಾಂಕ:24.07.2000 |
| 2 | ಶ್ರೀ ಬಿ.ಟಿ.ರಂಗಸ್ವಾಮಿ, ಬಿನ್ ತಿಪ್ಪಣ್ಣ ಕಛೇರಿ ಮೇಲ್ವಿಚಾರಕರು, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆ, ಚಾಮರಾಜನಗರ ಜಿಲ್ಲೆ | ದಿನಾಂಕ:24.07.2000 |
| 3 | ಶ್ರೀ ಕೃಷ್ಣಪ್ಪ ಬಿನ್ ಅರುಣಾಚಲ ಗೌಂಡರ್ (ಪ್ರಕರಣದ ಫಿರ್ಯಾದುದಾರರು) | ದಿನಾಂಕ:25.07.2000 |
| 4 | ಶ್ರೀ ಎಂ.ಅನಿಲ್ ಕುಮಾರ್, ಬಿನ್ ಮಹದೇವಪ್ಪ ದ್ವಿ.ದ.ಸ.(ಪಂಚ ನಂ.1) ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಇಂಜಿನಿಯರ್, ಮೈಸೂರು | ದಿನಾಂಕ:25.07.2000 |
| 5 | ಶ್ರೀ ಕೆ.ವಿ.ಸಿದ್ದಯ್ಯ, ಬಿನ್ ಬೆಳ್ಳಯ್ಯ, ಎರಡನೇ ದರ್ಜೆ ಸರ್ವೇಯರ್(ಪಂಚ ನಂ2) ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು. | ದಿನಾಂಕ:25.07.2000 |
| 6 | ಶ್ರೀ ಪರಮೇಶ್ ಬಿನ್.ನೀಲಕಂಠಯ್ಯ ಮುಖ್ಯ ಪೇದೆ ಪಿಡಬ್ಲ್ಯೂ, ಕೆ.ಎಲ್.ಎ ಮೈಸೂರು | ದಿನಾಂಕ:26.07.2000 |
| 7 | ಶ್ರೀ ವಿ.ನಾಗೇಂದ್ರ ಬಿನ್.ಲೇಟ್ ವೆಂಕಟಾಚಲಯ್ಯ ಮುಖ್ಯ ಪೇದೆ, ಪಿ.ಡಬ್ಲ್ಯೂ, ಕೆ.ಎಲ್.ಎ. ಮೈಸೂರು | ದಿನಾಂಕ:26.07.2000 |
| 8 | ಶ್ರೀ ವಿ.ಮುರುಳೀಧರ, ಬಿನ್.ಲೇಟ್ ವೈ.ವಿ.ವೆಂಕಟಾಚಾರ್ ಸಿ.ಪಿ.ಸಿ ಪಿಡಬ್ಲ್ಯೂ ಕೆ.ಎಲ್.ಎ. ಮೈಸೂರು | ದಿನಾಂಕ:26.07.2000 |
| 9 | ಶ್ರೀ ಕೆ.ಗೋಪಾಲಕೃಷ್ಣ ಬಿನ್.ಡಾ.ಕೃಷ್ಣಪ್ಪ, ಸಿ.ಪಿ.ಸಿ. ಪಿಡಬ್ಲ್ಯೂ, ಕೆ.ಎಲ್.ಎ ಮೈಸೂರು | ದಿನಾಂಕ:26.07.2000 ಮತ್ತು ದಿನಾಂಕ:31.10.2000 |
| 10 | ಶ್ರೀ ಎಂ.ಎಸ್.ಬಾಲಸುಬ್ರಹ್ಮಣ್ಯ ಬಿನ್ ಲೇಟ್ ಎಂ.ಎಸ್. ನಾಗೇಶ್ವರರಾವ್ ಸಿ.ಪಿ.ಸಿ. ಪಿಡಬ್ಲ್ಯೂ ಕೆ.ಎಲ್.ಎ ಮೈಸೂರು | ದಿನಾಂಕ:26.07.2000 |

(ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:ಬಿಸಿಎಂ:ಜಾಜಿ/ಸಿಆರ್ 65/99-2000
ವಿಷಯ:ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರ ನೀಡುವ ಸಲುವಾಗಿ

(ಏ) ಆಪಾದಿತರ ಸಮಜಾಯಿಸಿ ಹೇಳಿಕೆಗಳು
ವಿಷಯ: ಲಂಚದ ಹಣದ ಸ್ವೀಕಾರ ಸಂಬಂಧ, ದಿನಾಂಕ:24.07.2000

ದಿನಾಂಕ:24.07.2000ರಂದು ಸೋಮವಾರ ಅಪರಾಹ್ನ ಶ್ರೀ ಕೃಷ್ಣಪ್ಪ ಬಿನ್ ಅರುಣಾಚಲ ಗೌಂಡರ್ ಇವರಿಗೆ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಸಿಂಧುತ್ವ ಪತ್ರಕ್ಕೆ ಸಂಬಂಧಿಸಿದಂತೆ ಲಂಚ ಹಣ ಪಡೆದಿದ್ದಾರೆಂಬ ಬಗ್ಗೆ ಧಾಳಿ ನಡೆಸಿದ ವಿಷಯಕ್ಕೆ ಸಂಬಂಧಿಸಿದಂತೆ ಪ್ರಮಾಣ ಪೂರ್ವಕವಾಗಿ ಸಲ್ಲಿಸುವುದೇನೆಂದರೆ ಸದರಿ ಅಭ್ಯರ್ಥಿಯು ಸಿಂಧುತ್ವ ಪ್ರಮಾಣ ಪತ್ರವನ್ನು ಈಗಾಗಲೇ ಈ ದಿವಸ ಪಡೆದಿರುತ್ತಾರೆ. ಈ ಸಂಬಂಧ ಸದರಿ ಅಭ್ಯರ್ಥಿಯಿಂದ ನಾನು ಯಾವುದೇ ರೀತಿಯ ಹಣವನ್ನು ಪಡೆದಿರುವುದಿಲ್ಲ ಹಾಗೂ ಹಣವನ್ನು ನಾನು ಮುಟ್ಟಿರುವುದಿಲ್ಲ. ಅಭ್ಯರ್ಥಿ ಮತ್ತು ಅವರ ತಂದೆಯು ತಮಗೆ ನೀಡಿರುವ ದೂರು ಸುಳ್ಳೆಂದು ಮತ್ತು ಸತ್ಯಕ್ಕೆ ದೂರವಾಗಿದೆ ಎಂದು ಆಪಾದಿತ ಅಧಿಕಾರಿಯು ಹೇಳಿಕೆ ನೀಡಿರುವರು.

3. ತನಿಖಾಧಿಕಾರಿಗಳು ಶ್ರೀ ಬಿ.ಹೆಚ್.ಚಂದ್ರಕಾಂತ್, ಪೋಲೀಸ್ ಇನ್‌ಸ್ಪೆಕ್ಟರ್ ಕೆ.ಎಲ್.ಎ. ಚಾಮರಾಜನಗರ ಇವರು ಶ್ರೀ ಬಿ.ಗಿರೀಶ್, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ವಿರುದ್ಧ ದಂಡಾರ್ಹ ಪ್ರಕರಣವನು ಮೈಸೂರು ಪೋಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಚಾಮರಾಜನಗರ ತಾಲ್ಲೂಕು ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ:6/2000 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7,13(1) (ಡಿ)ರ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4. ಆಪಾದಿತರು ಶ್ರೀ ಬಿ.ಗಿರೀಶ್, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಫಿರ್ಯಾದಿಯಾದ ಶ್ರೀ ಕೃಷ್ಣಪ್ಪ, ತಂದೆ ಶ್ರೀ ಅರುಣಾಚಲ ಗೌಂಡರ್, ಚಾಮರಾಜನಗರ ತಾಲ್ಲೂಕು, ಹೊನ್ನವಳ್ಳಿ ಪೋಸ್ಟ್, ಯಲಚಗೆರೆ ತೋಟ, ಇವರು

ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ನೀಡುವ ಸಿಂಧುತ್ವ ಪ್ರಮಾಣ ಪತ್ರ ಕೋರಿಕೆಯ ಸರ್ಕಾರಿ ಕೆಲಸವನ್ನು ಮಾಡಲು ರೂ.4000ಗಳ ಅಕ್ರಮ ಸಂಭಾವನೆಯನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:24.07.2000ರಂದು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿ ಚಾಮರಾಜನಗರ ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಬಿ.ಗಿರೀಶ್, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಚಾಮರಾಜನಗರ ಜಿಲ್ಲೆ ಇವರು ಅಕ್ರಮ ಸಂಭಾವನೆಯಾದ 4000 ರೂ.ಗಳನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಲಂಚದ ಹಣದ ಸಂಪರ್ಕವನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮರ್ಜನೆ ಮಾಡಿ ಫಿನಾಪ್ತಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರನ ನಡುವಿನ ವ್ಯವಹಾರಗಳನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.4000 ಗಳನ್ನು ಬಿ.ಗಿರೀಶ್ ರವರು ಶ್ರೀ.ಕೃಷ್ಣಪ್ಪ, ತಂದೆ ಶ್ರೀ ಅರುಣಾಚಲ ಗೌಂಡರ್ ರವರಿಂದ ಚಾಮರಾಜನಗರ ದಲ್ಲಿ ಪಡೆದಿದ್ದು ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5. ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ವಿಷಯವು ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಆಪಾದಿತ ಅಧಿಕಾರಿಯಾದ ಶ್ರೀ ಬಿ.ಗಿರೀಶ್ ರವರನ್ನು ಲಂಚನಿರೋಧಕ ಕಾಯ್ದೆ 1988ರ ಅನ್ವಯ 7,13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂಬುದನ್ನು ಸರ್ಕಾರವು ಮನಗಂಡಿದೆ.

6. ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು ನಿಯಮಗಳು 1957ರ ನಿಯಮ 9(ಸಿ)ರಲ್ಲಿ ನೇಮಕಾತಿಯಾದ ಸರ್ಕಾರವು ಸದರಿ ಅಧಿಕಾರಿಯನ್ನು ಸೇವೆಯಿಂದ ವಜಾ ಮಾಡಲು ಸಕ್ಷಮ ಪ್ರಾಧಿಕಾರ ಹೊಂದಿದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ರ ಅಡಿ ಆಪಾದಿತ ನೌಕರನಾದ ಶ್ರೀ ಬಿ.ಗಿರೀಶ್, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಚಾಮರಾಜನಗರ ರವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

7. ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಮೇಲೆ ಓದಲಾದ ಕ್ರಮಸಂಖ್ಯೆ (6)ರ ದಿನಾಂಕ 07.07.2005ರಲ್ಲಿ ಶ್ರೀಯುತ ಬಿ.ಗಿರೀಶ್, ಹಿಂದಿನ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಚಾಮರಾಜನಗರ ಇವರ ಮೇಲಿನ ಲಂಚ ಸ್ವೀಕೃತಿಯ ಆರೋಪಕ್ಕೆ ಸಂಬಂಧಿಸಿದಂತೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಮಂಜೂರಾತಿ ನೀಡಿದೆ.

8. ಮೇಲೆ ಓದಲಾದ ಕ್ರಮಸಂಖ್ಯೆ (7) ದಿನಾಂಕ: 20.07.2005ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ದಿನಾಂಕ: 07.07.2005ರ ಆದೇಶವನ್ನು ಸೂಕ್ತವಾಗಿ ಮಾರ್ಪಡಿಸಿ ಸದರಿ ಆದೇಶದಲ್ಲಿ ಪಿ.ಸಿ.ಆಕ್ಟ್ 1988 ಕಲಂ 7,13(1)(ಡಿ) ಸಹವಾಚಕ 13(2)ರ ಅನ್ವಯ ಅಭಿಯೋಜನೆ ಮಂಜೂರಾತಿ ನೀಡುವ ಕುರಿತು ಆದೇಶ ಮಾರ್ಪಡಿಸಲು ಕೋರಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 343 ಬಿಇಟಿ 2000, ಬೆಂಗಳೂರು ದಿನಾಂಕ: 14ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ತಿಳಿಸಲಾದ ಎಲ್ಲ ಅಂಶಗಳನ್ನು ಸರ್ಕಾರ ಪರಿಶೀಲಿಸಿದ್ದು, ಸರ್ಕಾರಿ ಆದೇಶ ಸಂಖ್ಯೆ: ಸಕಇ 343 ಬಿಇಟಿ 2000, ದಿನಾಂಕ:07.07.2005ನ್ನು ಭಾಗಶ: ಮಾರ್ಪಡಿಸಿ, ಆರೋಪಿಯಾದ ಶ್ರೀ ಬಿ.ಗಿರೀಶ್, ಹಿಂದಿನ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಚಾಮರಾಜನಗರ ಹಾಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಉಡುಪಿ ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವು ಸರ್ಕಾರಕ್ಕೆ ಇದ್ದು ಸರ್ಕಾರವು ಶ್ರೀ ಬಿ.ಗಿರೀಶ್, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಉಡುಪಿ ಜಿಲ್ಲೆ ಉಡುಪಿ ಇವರನ್ನು ಪಿ.ಸಿ. ಆಕ್ಟ್ 1988ರ ಕಲಂ 7,13(1)(ಡಿ) ಸಹವಾಚಕ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 17

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ಕೆ.ಹೆಚ್. ಜ್ಞಾನೇಂದ್ರಪ್ಪ ರವರ ವಿರುದ್ಧ ದೂರು ಪ್ರಕರಣದ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** ತಾ: 23–08–2005 ಸಂಖ್ಯೆ: Compt/Uplok/BCD.229/2003/DRE-2ರ ಲೋಕಾಯುಕ್ತ ರಿಜಿಸ್ಟ್ರಾರ್ ರವರ ಪತ್ರ.

**ಪ್ರಸ್ತಾವನೆ:**

1) ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ:ಕೆ.ಹೆಚ್.ಜ್ಞಾನೇಂದ್ರಪ್ಪ ರವರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶ್ರೀ ಎಲ್.ಚಂದ್ರಯ್ಯ, ಅಧೀಕ್ಷಕರು, ಕೃಷಿ ನಿರ್ದೇಶನಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು ಇವರ

ವೈದ್ಯಕೀಯ ವೆಚ್ಚಗಳ ಮರು ಪಾವತಿಯಲ್ಲಿ ಹಣ ದುರುಪಯೋಗವಾಗಿದೆಯೆಂದು ಇವರ ವಿರುದ್ಧ ಶ್ರೀ ಆಂಜನಪ್ಪ ಎಂಬುವರು ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನ ಬಗ್ಗೆ ತನಿಖೆ ನಡೆಸಿ ದಿನಾಂಕ 16–01–2003ರೊಳಗೆ ವರದಿಯನ್ನು ಸಲ್ಲಿಸುವಂತೆ ಜಂಟಿ ನಿರ್ದೇಶಕರು, ಕೃಷಿ ನಿರ್ದೇಶನಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಕರ್ನಾಟಕ ಲೋಕಾಯುಕ್ತದ ನಿಬಂಧಕರು ತಮ್ಮ ದಿನಾಂಕ 2–1–2003 ಸಂಖ್ಯೆ: Scompt/Misc/BCD/60/02/ARLD1ರ ಪತ್ರದಲ್ಲಿ ಸೂಚಿಸಿರುತ್ತಾರೆ. ಆದರೆ ಜಂಟಿ ನಿರ್ದೇಶಕರ ಕೋರಿಕೆಯ ಮೇರೆಗೆ ಕರ್ನಾಟಕ ಲೋಕಾಯುಕ್ತದ ನಿಬಂಧಕರು ತನಿಖಾ ವರದಿಯನ್ನು ಸಲ್ಲಿಸಲು ದಿನಾಂಕ: 31–1–2003ರವರೆಗೆ ಅಂದರೆ 15 ದಿನಗಳ ಕಾಲಾವಕಾಶವನ್ನು ನೀಡಿರುತ್ತಾರೆ.

2) ಶ್ರೀ ಎಲ್.ಚಂದ್ರಯ್ಯ ಅಧೀಕ್ಷಕರು ಇವರ ವೈದ್ಯಕೀಯ ವೆಚ್ಚದ ಮರು ಪಾವತಿಗಳ ಬಗ್ಗೆ ತಮ್ಮ ಕಛೇರಿ ಕೆಲಸ ಕಾರ್ಯಗಳ ಒತ್ತಡದಿಂದ ಖುದ್ದಾಗಿ ತನಿಖೆ ನಡೆಸಲು ಸಾಧ್ಯವಾಗದ ಕಾರಣ ನಿರ್ದೇಶಕರ ಪರವಾಗಿ ಸದರಿ ತನಿಖೆಯನ್ನು ಅವರ ಕಛೇರಿಯ ಪತ್ರ ಸಂಖ್ಯೆ: ಜಕೃನಿ:ಬೆಂನಜಿ:ಸಿ–2:ವಿಚಾರಣೆ:2002–03, ದಿನಾಂಕ 14–01–2003ರಲ್ಲಿ ಶ್ರೀ ಡಿ.ಎಸ್.ರಾಮಪ್ರಸಾದ್, ಪ್ರಭಾರ ಸಹಾಯಕ ಕೃಷಿ ನಿರ್ದೇಶಕರು (ವಿತ), ಬೆಂಗಳೂರು ನಗರ ಜಿಲ್ಲೆ, ಇವರಿಗೆ ತನಿಖೆ ಮಾಡಿ ವರದಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಈ ಹಿನ್ನಲೆಯಲ್ಲಿ ಸದರಿ ಅಧಿಕಾರಿಯು ವಿವಿಧ ಹಂತಗಳಲ್ಲಿ ತನಿಖೆ/ಪರಿಶೀಲನೆ ನಡೆಸಿ ಕೆಳಕಂಡ ಅಂಶಗಳನ್ನೊಳಗೊಂಡಂತೆ ದಿನಾಂಕ: 29–01–2003ರಂದು ವರದಿಯನ್ನು ಸಲ್ಲಿಸಿರುತ್ತಾರೆ.

ಸಪ್ತಗಿರಿ ಮೆಡಿಕಲ್ಸ್, ವೈಯಾಲಿಕಾವಲ್, ಬೆಂಗಳೂರು ಇಲ್ಲಿ ದಿನಾಂಕ 15–01–2002, ಬಿಲ್ ನಂ.2945, ರೂ.555/– (ಐದು ನೂರ ಐವತ್ತೈದು ರೂಪಾಯಿಗಳು ಮಾತ್ರ)ಗಳಿಗೆ ಔಷಧಿಗಳನ್ನು ಶ್ರೀ ಎಲ್.ಚಂದ್ರಯ್ಯ ಇವರು ಖರೀದಿಸಿರುತ್ತಾರೆಂದು ಅಂಗಡಿಯ ಮಾಲೀಕರು ತಿಳಿಸಿರುತ್ತಾರೆ. ಆದರೆ ಅದೇ ಬಿಲ್ಲಿನ ಸಂಖ್ಯೆ ಹೊಂದಿರುವ ಅಂದರೆ ಬಿಲ್ ನಂ.2945, ದಿನಾಂಕ 15–01–2002ರಲ್ಲಿ ಕಛೇರಿಗೆ ಮರುಪಾವತಿಗಾಗಿ ಸಲ್ಲಿಸಿರುವ ಬಿಲ್ಲಿನಲ್ಲಿ ರೂ.2555 (ಎರಡು ಸಾವಿರದ ಐದುನೂರ ಐವತ್ತೈದು ರೂಪಾಯಿಗಳು ಮಾತ್ರ) ಎಂದು ನಮೂದಿಸಲಾಗಿದೆ. ಸದರಿ ಮೊತ್ತದ ಬಿಲ್ಲಿಗೆ ಡಾ:ಕೆ.ಹೆಚ್.ಜ್ಞಾನೇಂದ್ರಪ್ಪ, ಸಹಾಯಕ ಪ್ರಾಧ್ಯಾಪಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ರವರು ದೃಢೀಕರಿಸಿರುವುದು ಗಮನಿಸಲಾಗಿದೆ.

ಶ್ರೀನಿವಾಸ ಮೆಡಿಕಲ್ಸ್, ನಾಗಪ್ಪ ಬೀದಿ, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು–03 ಇಲ್ಲಿ ದಿನಾಂಕ 08–12–2002, ಬಿಲ್ ನಂ.21434, ರೂ.510.50 (ಐದುನೂರ ಹತ್ತು ರೂಪಾಯಿಗಳು ಮತ್ತು ಐವತ್ತು ಪೈಸೆ)ಗಳಿಗೆ ಔಷಧಿಗಳನ್ನು ಶ್ರೀ ಎಲ್.ಚಂದ್ರಯ್ಯನವರು ಖರೀದಿಸಿರುತ್ತಾರೆಂದು ಅಂಗಡಿಯ ಮಾಲೀಕರು ತಿಳಿಸಿರುತ್ತಾರೆ. ಆದರೆ ಅದೇ ಬಿಲ್ಲಿನ ಸಂಖ್ಯೆಯನ್ನು ಹೊಂದಿರುವ ಅಂದರೆ ಬಿಲ್ ನಂ.21434, ದಿನಾಂಕ 18–12–2002ರಲ್ಲಿ ಈ ಕಛೇರಿಗೆ ಮರುಪಾವತಿಗಾಗಿ ಸಲ್ಲಿಸಿರುವ ಬಿಲ್ಲಿನಲ್ಲಿ ರೂ.2510.50 (ಎರಡು ಸಾವಿರದ ಐದು ನೂರ ಹತ್ತು ರೂಪಾಯಿಗಳು ಮತ್ತು ಐವತ್ತು ಪೈಸೆ ಮಾತ್ರ) ಎಂದು ನಮೂದಿಸಲಾಗಿದೆ. ಸದರಿ ಮೊತ್ತದ ಬಿಲ್ಲನ್ನು ಡಾ:ಕೆ.ಹೆಚ್.ಜ್ಞಾನೇಂದ್ರಪ್ಪ, ಸಹಾಯಕ ಪ್ರಾಧ್ಯಾಪಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ರವರು ದೃಢೀಕರಿಸಿ ಸಹಿ ಮಾಡಿರುತ್ತಾರೆ.

3) ಮೇಲೆ ಕಾಣಿಸಿರುವ ಎರಡೂ ಬಿಲ್ಲುಗಳ ಮೊತ್ತ ರೂ.5065/–(ಐದು ಸಾವಿರದ ಅರವತ್ತೈದು ರೂಪಾಯಿಗಳು ಮಾತ್ರ) ಅವರ ಕಛೇರಿಯ ಆದೇಶ ಸಂಖ್ಯೆ: ಲೆಕ್ಕ–2/ವೈವೆಮ/30/2001–02, ದಿನಾಂಕ 01–02–2002ರಲ್ಲಿ ಬಿಲ್ಲುಗಳನ್ನು ನಗದೀಕರಿಸಿ ದಿನಾಂಕ 26–03–2002ರಂದು ಶ್ರೀ ಎಲ್.ಚಂದ್ರಯ್ಯ ಇವರಿಗೆ ಪಾವತಿಸಲಾಗಿದೆ.

4) ಇದೇ ರೀತಿಯ ಎರಡನೇ ಪ್ರಕರಣದಲ್ಲಿ ದೇವಿ ಮೆಡಿಕಲ್ಸ್, ರಾಜಾಜಿನಗರ, ಬೆಂಗಳೂರು–10 ಇವರ ಬಿಲ್ ನಂ.3983, ದಿನಾಂಕ 13–07–2002ರಂದು ರೂ.507.20 (ಐದುನೂರ ಏಳು ರೂಪಾಯಿಗಳು ಮತ್ತು ಇಪ್ಪತ್ತು ಪೈಸೆ ಮಾತ್ರ) ಬಿಲ್ ನಂ.4009/ 21–07–2002ರಂದು ರೂ.513.00 (ಐದುನೂರ ಹದಿಮೂರು ರೂಪಾಯಿಗಳು ಮಾತ್ರ) ಗಳಿಗೂ ಶ್ರೀ ಎಲ್.ಚಂದ್ರಯ್ಯ ಔಷಧಿಗಳನ್ನು ಖರೀದಿಸಿರುವುದಾಗಿ ಅಂಗಡಿಯ ಮಾಲೀಕರು ತಿಳಿಸಿರುತ್ತಾರೆ. ಆದರೆ ಅದೇ ಬಿಲ್ಲಿನ ಸಂಖ್ಯೆಯನ್ನು ಹೊಂದಿರುವ ಅಂದರೆ ಕ್ರಮವಾಗಿ ಬಿಲ್ ನಂ.393/13–07–2002ರಂತೆ ರೂ.2507.20 (ಎರಡು ಸಾವಿರದ ಐದುನೂರ ಏಳು ರೂಪಾಯಿಗಳು ಇಪ್ಪತ್ತು ಪೈಸೆ ಮಾತ್ರ)ಗಳಿಗೂ ಮತ್ತು ಬಿಲ್ ನಂ.4009/21–07–2002ರಂತೆ ರೂ.2513.00 (ಎರಡು ಸಾವಿರದ ಐದುನೂರ ಹದಿಮೂರು ರೂಪಾಯಿಗಳು ಮಾತ್ರ) ಗಳಿಗೂ ಈ ಕಛೇರಿಗೆ ಮರು ಪಾವತಿಗಾಗಿ ಸಲ್ಲಿಸಿರುವ ಬಿಲ್ಲಿನಲ್ಲಿ ನಮೂದಿಸಲಾಗಿದೆ. ಈ ಎರಡೂ ಬಿಲ್ಲುಗಳ ಮೊತ್ತ ರೂ.5020.00 (ಐದು ಸಾವಿರದ ಇಪ್ಪತ್ತು ರೂಪಾಯಿಗಳು ಮಾತ್ರ)ಗಳನ್ನು ಡಾ:ಕೆ.ಹೆಚ್.ಜ್ಞಾನೇಂದ್ರಪ್ಪ, ಸಹಾಯಕ ಪ್ರಾಧ್ಯಾಪಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ರವರು ನಮೂನೆ–ಸಿ [vide rule 15(3) i.e., Application form for claiming refund of medical expenses] ಹಾಗೂ Essential Certificate [vide rule 15(1)] ರಲ್ಲಿ ಮೇಲು ಸಹಿ ಮಾಡಿರುವುದನ್ನು ಗಮನಿಸಲಾಗಿದೆ. ಸದರಿ ಬಿಲ್ಲುಗಳ ಮೊತ್ತವು ಅಧಿಕವಾಗಿದ್ದ ಕಾರಣ, ಸದರಿ ಬಿಲ್ಲಿನ ಮೊತ್ತದ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಅಭಿಪ್ರಾಯ ಕೋರಲಾಗಿತ್ತು. ನಿರ್ದೇಶಕರು ರೂ.1,429/–ಗಳನ್ನು ಪಾವತಿ ಮಾಡಲು ಸೂಚಿಸಿದ್ದರು. ಈ ಮಧ್ಯ ಇದರ ಸಂಬಂಧ ಲೋಕಾಯುಕ್ತದಲ್ಲಿ ದೂರು ದಾಖಲಾದ ಕಾರಣ ಸದರಿ ಬಿಲ್ಲಿನ ಮೊತ್ತವನ್ನು ಪಾವತಿ ಮಾಡುವುದನ್ನು ತಡೆ ಹಿಡಿಯಲಾಯಿತು.

5) ಸದರಿ ತನಿಖಾ ವರದಿಯನ್ನು ಉಪಲೋಕಾಯುಕ್ತರು ಕೂಲಂಕಷವಾಗಿ ಪರಿಶೀಲಿಸಿದ ನಂತರ ಆಪಾದಿತ ಅಧಿಕಾರಿಯಾದ ಶ್ರೀ ಎಲ್.ಚಂದ್ರಯ್ಯ ರವರು ವೈದ್ಯಕೀಯ ವೆಚ್ಚದ ಮರು ಪಾವತಿ ಬಾಬತ್ತು ಅರ್ಹತೆಗಿಂತ ಹೆಚ್ಚಿನ ಮೊತ್ತವನ್ನು ಸರ್ಕಾರದ ಬೊಕ್ಕಸಕ್ಕೆ ವಂಚನೆ ಮಾಡಿ ಪಡೆದಿದ್ದು ಮತ್ತು ಅದೇ ರೀತಿ ವಂಚನೆ ಮಾಡಿ ಇನ್ನು ಕೆಲವು ಬಿಲ್ಲುಗಳ ಮೊತ್ತವನ್ನು ಅರ್ಹತೆಗಿಂತ ಹೆಚ್ಚಿಗೆ ಪಡೆಯಲು ನಡೆಸಿದ ಪ್ರಯತ್ನಕ್ಕೆ ಡಾ:ಕೆ.ಹೆಚ್. ಜ್ಞಾನೇಂದ್ರಪ್ಪ ನವರು ಕೈಗೂಡಿಸಿರುವುದು ಮೇಲ್ನೋಟಕ್ಕೆ ಅವರು ಸಲ್ಲಿಸಿರುವ ವಿವರಣೆಯಿಂದ ಕಂಡು ಬರುತ್ತಿರುವುದರಿಂದ ಹಾಗೂ ಸದರಿ ವಿವರಣೆಯು ಅತೃಪ್ತಿಕರವಾಗಿರುವುದರಿಂದ ಅವರು ದೋಷಿ ಎಂಬುದು ನಿಸಂದೇಹ ವಾಗಿರುತ್ತದೆಂದು ಅಭಿಪ್ರಾಯ ಪಟ್ಟು ಅವರ ವಿರುದ್ಧ ಕಠಿಣ ದಂಡನೆಯನ್ನು ವಿಧಿಸಲು ಅನುವಾಗುವಂತೆ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ ಮೇರೆಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಉಪಲೋಕಾಯುಕ್ತರಿಗೆ ವಹಿಸಲು ಮಾನ್ಯ ಉಪಲೋಕಾಯುಕ್ತರ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿದೆ.

6) ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸನ್ನು ಅಂಗೀಕರಿಸಿದ್ದು, ಕೆಳಕಂಡಂತೆ ಆದೇಶವನ್ನು ಹೊರಡಿಸಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 140 ಎಂಎಂಸಿ 2005, ಬೆಂಗಳೂರು, ದಿನಾಂಕ 27ನೇ ಡಿಸೆಂಬರ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 14–ಎ ನಿಯಮದಲ್ಲಿ ನಿಹಿತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ:ಕೆ.ಹೆಚ್.ಜ್ಞಾನೇಂದ್ರಪ್ಪ

(ಈಗಾಗಲೇ ಶ್ರೀ ತೆಲಗಿ ರವರ ಪ್ರಕರಣದಲ್ಲಿ ಅಮಾನತ್ತಿನಲ್ಲಿದ್ದಾರೆ) ರವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಉಪಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 97 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕರಾದ ಡಾ:ಟಿ.ಮಂಜುನಾಥ್ ಇವರಿಗೆ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 17-12-2005 ಸಂಖ್ಯೆ:ಆಕುಕ 340 ಎಂಎಂಸಿ 2004ರ ಅಧಿಸೂಚನೆ.
2) ದಿನಾಂಕ 29-11-2005 ಸಂಖ್ಯೆ: ಆಕುಕ 61 ಎಂಎಂಸಿ 2005ರ ಸರ್ಕಾರಿ ಆದೇಶ.
3) ದಿನಾಂಕ 17-12-2005ರ ಡಾ:ಟಿ.ಮಂಜುನಾಥ್ ರವರ ಮನವಿ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕರಾದ ಡಾ:ಟಿ.ಮಂಜುನಾಥ್ ರವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದುದ್ದರಿಂದ ಅವರ ನಿವೃತ್ತಿ ಸೌಲಭ್ಯಗಳನ್ನು ತಡೆ ಹಿಡಿಯಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅವರನ್ನು ಆಪಾದನೆಗಳಿಂದ ಮುಕ್ತಗೊಳಿಸಿ ಇಲಾಖಾ ವಿಚಾರಣೆಯನ್ನು ನಡೆಸುವುದನ್ನು ಕೈಬಿಡಲಾಗಿದೆ. ಈ ಹಿನ್ನಲೆಯಲ್ಲಿ ಅವರು ತಡೆಹಿಡಿಯಲಾದ ಪಿಂಚಣಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಕೋರಿಕೊಂಡಿರುತ್ತಾರೆ. ಪ್ರಕರಣವನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 340 ಎಂಎಂಸಿ 2004, ದಿನಾಂಕ 3ನೇ ಜನವರಿ 2006**

ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕರಾದ ಡಾ:ಟಿ.ಮಂಜುನಾಥ್ ರವರ ತಡೆಹಿಡಿಯಲಾದ ಪಿಂಚಣಿ ಸೌಲಭ್ಯಗಳನ್ನು ಅವರಿಂದ ಸರ್ಕಾರಕ್ಕೆ ಬರಬೇಕಾದ ಬೆಬಾಕಿ ಇತ್ಯಾದಿಗಳು ಇದ್ದಲ್ಲಿ ಅವುಗಳನ್ನು ಕಡಿತಗೊಳಿಸಿ ಬಿಡುಗಡೆಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 98 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ರಾಜಭಾಷಾ (ವಿಧಾಯೀ) ಆಯೋಗದ ಉಪಯೋಗಕ್ಕಾಗಿ ಒಂದು ವಾಹನವನ್ನು ದಿನಾಂಕ:18.3.2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 278 ಶಿವಾನಿ 2000ದಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಬಾಡಿಗೆ ಆಧಾರದ ಮೇಲೆ ಪಡೆಯಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 44 ಭಾನಿವಿ 2005, ದಿನಾಂಕ:14.10.2005.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 278 ಶಿವಾನೀ 2000, ದಿನಾಂಕ:18.3.2002.
3) ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಟಿಪ್ಪಣಿ ಸಂಖ್ಯೆ: ಕಾಸಂವ್ಯಸ:2652:05, ದಿನಾಂಕ:28.10.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ರಾಜಭಾಷಾ (ವಿಧಾಯೀ) ಆಯೋಗವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ:30.5.2006ರವರೆಗೆ ಪುನರ್ ರಚಿಸಲಾಗಿದೆ ಹಾಗೂ ಈ ಅವಧಿಯಲ್ಲಿ ಆಯೋಗದ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸರ್ಕಾರೇತರ ಸದಸ್ಯರುಗಳ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಆದೇಶಗಳಿಗೆ ಒಳಪಟ್ಟಿರುವುದಾಗಿ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸರ್ಕಾರದ ಇಲಾಖೆಗಳು ಅಧಿಕೃತ ಕೆಲಸ ಕಾರ್ಯಗಳಿಗಾಗಿ ವಾಹನಗಳನ್ನು ಖರೀದಿಸುವ ಬದಲು ಆರ್ಥಿಕ ಇಲಾಖೆಯ ಪೂರ್ವಾನುಮತಿಯನ್ನು ಪಡೆದು ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಪಡೆಯಲು ಸರ್ಕಾರವು ಮಂಜೂರಾತಿ ನೀಡಿದೆ.

ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರು ತಮ್ಮ ಟಿಪ್ಪಣಿ ಸಂಖ್ಯೆ:ಸಂವ್ಯಶಾಇ 3779, ದಿನಾಂಕ:29.10.2005ರಲ್ಲಿ ರಾಜ ಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರು, ಆಯೋಗದ ಕರ್ತವ್ಯಗಳನ್ನು ಶೀಘ್ರವಾಗಿ ನಿರ್ವಹಿಸಲು ಅನುವಾಗುವಂತೆ ವಾಹನವನ್ನು ಬಾಡಿಗೆ ಆಧಾರದ ಮೇಲೆ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 278 ಶಿವಾನೀ 2000, ದಿನಾಂಕ:18.3.2002ರ ಷರತ್ತಿಗೊಳಪಟ್ಟು ಪಡೆಯಲು ಆರ್ಥಿಕ ಇಲಾಖೆಯ ಅನುಮೋದನೆಗಾಗಿ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳ ಸಚಿವರ ಅನುಮೋದನೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾಗಿರುವ ಮಾನ್ಯ ಸಚಿವರ ಟಿಪ್ಪಣಿಯಲ್ಲಿ ಕಾರ್ಯದರ್ಶಿಯವರ ಪ್ರಸ್ತಾವನೆಯನ್ನು ಅನುಮೋದಿಸಲಾಗಿದೆ. ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ಪಡೆಯಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 44 ಭಾನಿವಿ 2005 (ಭಾಗ), ಬೆಂಗಳೂರು, ದಿನಾಂಕ: 13ನೇ ಜನವರಿ 2006**

ರಾಜ ಭಾಷಾ (ವಿಧಾಯೀ) ಆಯೋಗದ ಉಪಯೋಗಕ್ಕಾಗಿ ಒಂದು ವಾಹನವನ್ನು ದಿನಾಂಕ:18.3.2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 278 ಶಿವಾನಿ 2000ರಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಬಾಡಿಗೆ ಆಧಾರದ ಮೇಲೆ ಪಡೆಯಲು ಮಂಜೂರಾತಿ ನೀಡಿದೆ.

ಬಾಡಿಗೆಯನ್ನು ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆ-092-08-ಭಾಷಾಂತರ ನಿರ್ದೇಶಕರು-ರಾಜ ಭಾಷಾ (ವಿಧಾಯೀ) ಆಯೋಗ-(ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1224 ವೆಚ್ಚ-7/05, ದಿನಾಂಕ:9.1.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 103

**ರಿಚಾರ್ಡ್ ಲೋಬೊ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**COMMERCE & INDUSTRIES SECRETARIAT**

**Subject:** Restructuring of Karnataka Vidyuth Karkhane ltd (KAVIKA) Bangalore.

**Read:**
1) Letter No. KAVIKA/MD/2004-05, Dated: 22.02.2005 of the Managing Director, Karnataka Vidyuth Karkhane Ltd., Bangalore.
2) Letter No. KAVIKA/MD/2005-06, Dated: 18.05.2005 of the Managing Director, Karnataka Vidyuth Karkhane Ltd., Bangalore.

**PREAMBLE:**

The Managing Director, KAVIKA in his letter dated: 22.02.2005 cited (1) above, sought approval of the Government to dispose approximately 8 acre 38 guntas land belonging to the KAVIKA Ltd to clear the out standing dues of the Bank loans obtained for its operations.

2. When the above issue was under consideration, the Managing Director, Karnataka Vidyuth, Karkhane Ltd., Bangalore in his further letter dated: 18.05.2005 cited (2) above, has suggested for merger of Karnataka Vidyuth Karkhane Limited (KAVIKA) with Bangalore Electricity Supply Company (BESCOM).

**GOVERNMENT ORDER No. CI 12 CEL 2005, Bangalore, Dated: 5th December 2005**

3. Government have examined the proposal in detail and after taking all the aspects into consideration pass the following orders;

(1) The current arrangement where the Managing Director, BESCOM is also functioning as Managing Director, KAVIKA, shall continue. The merger decision shall be implemented within one year from the date of issue of this order. The intervening period would be used to streamline the organization and settle the liabilities.

(2) Permission is given to KAVIKA to sell the vacant lands measuring approx 8 acres & 33 guntas as per schedule annexed to the best advantage of the company in a transparent manner with the direction that the sale proceeds should be utilized only for clearing the dues of the company with the Banks currently amounting to approximately Rs.16 crores.

(3) KPTCL & BESCOM shall redeploy the staff of KAVIKA to the maximum extent possible in view of their requirement of staff for maintenance and repair of transformers. The remaining employees who cannot be redeployed or employed usefully by the ESCOMs/KPTCL should be offered VRS. The VRS package should be implemented early to reduce the employee strength of the company.

(4) The available the infrastructure of KAVIKA shall be utilized for servicing the transformers supplied to the ESCOMs and also for manufacturing transformers for BESCOM.

(5) In order to become a cost effective supplier and rehabilitate itself, KAVIKA is allowed to make direct sales to KPTCL/ESCOMs who are hereby exempted from the applicability of the KTTP Act as a special case (on supplies from KAVIKA only) for one year OR atleast till the arrangements as at para-(1) are in force.

(6) At the end of one year, if KAVIKA's staff has been either fully redeployed across the ESCOMs are have resorted to VRS and the sale of such landed assets to settle the dues to the banks as also to liabilities such as suppliers bills etc., have been concluded, the Government will consider other options of putting the remaining assets of KAVIKA to alternate uses and derive maximum value, which may be transferred to the corpus of the proposed Rehabilitation / Renewal Fund for the purpose of rehabilitating such PSUs.

4. This order issues of the Concurrence of the Energy Department vide U.O. Note No. EN 90 EEB 2004, dated: 27.06.2005, Department of Public Enterprises Reforms vide its Endorsement No. DDPER 67 SPU 2005, dated: 01.09.2005 and Finance Department vide U.O.Note No.FD 1588 Exp-1/05, dated: 14.10.2005.

By Order and in the name of the Governor of Karnataka,

**K.L. JAYARAM**

Deputy Secretary to Government, Commerce & Industries Department.

**SCHEDULE TO THE GOVERNMENT ORDER No. CI 12 CEL 2005, Dated: 05.12.2005**

| | ACRE | GUNTAS |
|---|---|---|
| Survey No. 5 of Byatarayanapura, Mysore Road, Bangalore-26 | 4 | 38 |
| Survey No. 8 of Byatarayanapura, Mysore Road, Bangalore-26 | | |
| - Scooter shed | 0 | 20 |
| - KAVIKA Quarters | 2 | 00 |
| Survey No. 9 of Byatarayanapura, Mysore Road, Bangalore-26 | | |
| - Play Ground | 1 | 00 |
| Survey No. 10 of Byatarayanapura, Mysore Road, Bangalore-26 | | |
| - Canara Bank | 0 | 15 |

By Order and in the name of the Governor of Karnataka,

**K.L. JAYARAM**

P.R. 51

Deputy Secretary to Government,
Commerce & Industries Department.

**ಒಳಾಡಳಿತ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ಒಇ 49 ಪಿಪಿಇ 2004(ಭಾಗ), ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2005**

ದಿನಾಂಕ: 15.12.2004ರ ಸರ್ಕಾರಿ ಆದೇಶ ಸಂಖ್ಯೆ: ಒಇ 49 ಪಿಪಿಇ 2004ರ ಆದೇಶದ ಭಾಗದ ಪುಟ 3ರ 6ನೇ ಸಾಲಿನಲ್ಲಿ "ನಿಯಮ 6ಎ 2ನೇ ಪರಂತುಕದ ಅನುಸಾರ" ಎಂಬುದರ ಬದಲಾಗಿ "ನಿಯಮ 6ರ 2ನೇ ಪರಂತುಕದ ಅನುಸಾರ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 56

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ).

**ಜಲ ಸಂಪನ್ಮೂಲ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಜಸಂಇ 106 ಎಂಟಿಜೆಡ್ 2005, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಸರ್ಕಾರದ ಆದೇಶ ಸಂಖ್ಯೆ: ಜಸಂಇ 29 ಎಂಟಿಜಿಡ್ 2004, ದಿನಾಂಕ: 18.4.2005ರ ಆದೇಶದಲ್ಲಿ "ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 86 ಎಫ್‌ಸಿ-1/2005 ರಲ್ಲಿ ನೀಡಿರುವ ಒಪ್ಪಿಗೆ ಅನುಸಾರ ಹೊರಡಿಸಲಾಗಿದೆ" ಎಂಬುದರ ಬದಲಿಗೆ,

"ಈ ಆದೇಶವನ್ನು ಕರ್ನಾಟಕ ಸರ್ಕಾರದ ವ್ಯವಹಾರ ನಿರ್ವಹಣೆ ನಿಯಮಗಳು 1977ರ ನಿಯಮ 17(2)ರ ಅನ್ವಯ ಹೊರಡಿಸಲಾಗಿದೆ" ಎಂಬುದಾಗಿ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದನ್ನು ಹೊರತುಪಡಿಸಿ ಬೇರೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 59

**ಐ.ಡಿ. ಧಮನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ವಿಶೇಷ ಕೋಶ).

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಇಡಿ 20 ಡಿಜಿಡಿ 98, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2005**

ದಿನಾಂಕ: 11.10.2005ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 20 ಡಿಜಿಡಿ 98ರ ಆದೇಶ ಭಾಗದಲ್ಲಿ "ಸರ್ಕಾರಿ ಪದವಿಪೂರ್ವ ಕಾಲೇಜು, ಪಡುವಲಹಿಪ್ಪೆ, ಟಿ.ನರಸೀಪುರ ತಾಲ್ಲೂಕ್, ಮೈಸೂರು ಜಿಲ್ಲೆ" ಎಂಬುದನ್ನು "ಸರ್ಕಾರಿ ಪದವಿಪೂರ್ವ ಕಾಲೇಜು, ಪಡುವಲಹಿಪ್ಪೆ, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 61

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**PERSONNEL AND ADMINISTRATIVE REFORMS SECRETARIAT**

**CORRIGENDUM**

**No. DPAR 133 SME 2004, Bangalore, Dated: 2nd January 2006**

In "Addendum" No. DPAR 133 SME 2004, dated: 13.12.2005, regarding Pay and Allowances for the period of deputation of Smt. Vandana Gurnani, IAS, the word "added" may be replaced instead of the word "substituted".

By Order and in the name of the Governor of Karnataka,

**K. SUDHAKARA SHETTY**

P.R. 62

Under Secretary to Government
Department of Personnel and Administrative Reforms (Service-1).

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**Subject:** Approval of the Project proposal of M/s Larsen and Tourbo Limited for establishment of **Software Development Centre & Hardware Production Facility** at Mysore-Orders-Reg.

**Read:** Proceedings of the 4th State High Level Clearance Committee [SHLCC] held on 06.06.2005.

**PREAMBLE:**

M/s Larsen and Tourbo Limited, Hootagalli, Mysore is a public limited company, incorporated under Indian Companies Act 1956 on 07.02.1946 in Mumbai. The company is in the field of technology driven engineering/construction, electrical and electronics and IT. The company's electrical/electronics/IT division is presently located in 40 acres of land in KIADB Industrial Area, Hebbal-Hootagalli Mysore, Now the company intends to expand and develop electronic and communication hardware and software capabilities by installing a hardware and software Development park in 33 acress of land in Mysore with an investment of Rs.92.10 Crores financed by internal accruals. The company is expected to provide employment generation for about 2000 persons.

In the proposal submitted for the 4th State High Level Clearance Committee (SHLCC) meeting held on 6.6.2005, the Company had requested Land, Power and Water Infrastructural facilities and has sought incentives and concessions as per Millennium IT Policy as modified from the Government. The SHLCC after detailed discussion of the project proposal of the said Company has recommended certain infrastructure facilities, incentives and concessions as per Millennium IT Policy as modified to the project, as detailed in the proceedings read above.

Government have examined the recommendations of the SHLCC Hence the following order:

**GOVERNMENT ORDER No. ITD 21 MDA 2005, Bangalore, Dated: 29th December 2005**

In the circumstances explained in the Preamble, Government are pleased to accord approval to the project proposal of M/s. Larsen and Tourbo Limited, for establishment of Software Development Centre and Hardware Production Facility at Mysore, with the following facilities and incentives.

**INFRASTRUCTURE FACILITIES:**

**LAND**

KIADB to allot 33 acres of land in plot No.356 to 363 at KIADB Indl. Area Hebbal, Hootagalli, Mysore for establishment of Software Development centre subject to land assessment by the land audit committee. As regard to land allotment made to SSI Units through DLSWA in the said area, KIADB may obtain the consent of the Units for relocation if they are willing to get relocated, otherwise allotment may be made in the layouts proposed by KIADB in Mysore.

**WATER:**

KIADB to consider supply of 3,00,000 ltrs. of water per day. The company shall adopt the elements of the National Water Policy including water harvesting, recharging of ground water, complete recycling of water etc. the Company shall indicate its net requirement of water after taking into account the quantum of recycled water.

**POWER:**

MESCOM to consider supply of 1500 KVA power.

**INCENTIVES & CONCESSIONS:**

Incentives and Concessions as per the Millennium IT Policy-2000 as modified shall be extended to the Company.

**ENVIRONMENT & POLLUTION CONTROL CLEARANCES:**

The proposed project is covered under Environment Impact Assessment Notification of MOEF dated 07.07.2004. The Company shall apply for and obtain pollution & environmental clearances from Karnataka State Pollution Control Board and MOEF Govt. of India as per the provisions of the Acts and Rules governing environmental protection.

**PROVIDING LOCAL EMPLOYMENT:**

The company shall provide employment to local persons as per para 8.6 of Industrial Policy 2001-06, in terms of prevailing policy of Government.

By Order and in the name of the Governor of Karnataka,

**B.V. KUMARASWAMY**

Under Secretary to Government

Information Technology, Biotechnology and

Science & Technology Department.

P.R. 65

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್.ಎಂ. ಪಾಟೀಲ್ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ ಇವರ ಕರ್ತವ್ಯಲೋಪ ಆರೋಪದ ಬಗ್ಗೆ ಮಾಡಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:**
1) ಕಾರಣ ಕೇಳುವ ನೋಟೀಸು ಸಂಖ್ಯೆ: ಲಾ 2004 ಪಿಪಿಇ 2001, ದಿನಾಂಕ: 02.04.2002.
2) ಶ್ರೀ ಆರ್.ಎಂ. ಪಾಟೀಲ್, ಸರ್ಕಾರಿ ಅಭಿಯೋಜಕರು ಇವರ ಪ್ರತಿವಾದದ ಲಿಖಿತ ಹೇಳಿಕೆ ದಿನಾಂಕ: 22.4.2002.
3) ಸರ್ಕಾರಿ ಆದೇಶ ಸಂಖ್ಯೆ: ಲಾ 204 ಪಿಪಿಇ 2001, ದಿನಾಂಕ: 19.12.2003.
4) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ: 04.03.2005.

**ಪ್ರಸ್ತಾವನೆ:**

ಶ್ರೀ ಆರ್.ಎಂ. ಪಾಟೀಲ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ ಇವರು SC ಸಂಖ್ಯೆ: 5/95ರ ಪ್ರಕರಣವನ್ನು ನ್ಯಾಯಾಲಯದಲ್ಲಿ ನಡೆಸುವಾಗ ಸದರಿ ಪ್ರಕರಣದ ದೋಷಾರೋಪಣ ಪಟ್ಟಿಯ 6ನೇ ಸಾಕ್ಷಿದಾರರಾದ ಶ್ರೀಮತಿ ಅಂಬವ್ವ ಕೋಂ ಮಹದೇವ ಇವರು ಪ್ರಕರಣದ ಪ್ರಮುಖ ಏಕೈಕ ಸಾಕ್ಷಿಯಾಗಿದ್ದು ಅವರನ್ನು ಪ್ರತಿಕೂಲ ಸಾಕ್ಷಿಯೆಂದು ಪರಿಗಣಿಸಿ ವಿಚಾರಣೆ ಮಾಡದೇ ಕರ್ತವ್ಯಲೋಪ ಎಸಗಿದ ಬಗ್ಗೆ ಹಾಗೂ SC ಸಂಖ್ಯೆ: 174/95ರ ಪ್ರಕರಣವನ್ನು ನಿರ್ವಹಿಸುವಾಗ ದೋಷಾರೋಪಣ ಪಟ್ಟಿಯ 7ನೇ ಸಾಕ್ಷಿದಾರರಾದ ಶ್ರೀ ರೆಹಮಾನ್ ಪಾಟೀಲ್ ಹಾಗೂ ಸಾಕ್ಷಿ 13, 14, 16 ಮತ್ತು 18ನೇ ಸಾಕ್ಷಿದಾರರನ್ನು ವಿಚಾರಣೆ ಮಾಡದೆ ಮತ್ತು ನ್ಯಾಯಾಲಯದಲ್ಲಿ ಹಾಜರಾಗಿದ್ದರೂ ಫಿರ್ಯಾದುದಾರರಾದ ಸಾಕ್ಷಿ (1) ಮತ್ತು ಸಾಕ್ಷಿ (4)ನ್ನು ವಿಚಾರಣೆ ಮಾಡದೆ ಕೈಬಿಟ್ಟು ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii)ವನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿದೆ.

ಮೇಲೆ ಕ್ರಮಾಂಕ 2 ರಲ್ಲಿ ಓದಲಾಗಿರುವ ದಿನಾಂಕ: 22.4.2003 ರಲ್ಲಿ ಆರೋಪಿ ಸರ್ಕಾರಿ ಅಧಿಕಾರಿ ಶ್ರೀ ಆರ್.ಎಂ. ಪಾಟೀಲ್ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ನಿರಾಕರಿಸಿ, ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಲಾಗಿದೆ ಮತ್ತು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii)ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದಿಲ್ಲ ಮತ್ತು ದುರ್ನಡತೆ ಎಸಗಿರುವುದಿಲ್ಲವೆಂದು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಮೇಲೆ ಕ್ರಮಾಂಕ (2) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) (ಸಿ) ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿದ್ದು, ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವ ಮತ್ತು ದುರ್ನಡತೆ ಎಸಗಿರುವ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ನೀಡಿರುತ್ತಾರೆ. ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 534 ಪಿಪಿಇ 2005, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2005**

ಶ್ರೀ ಆರ್.ಎಂ. ಪಾಟೀಲ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ ಇವರ ಮೇಲೆ SC ಸಂಖ್ಯೆ: 5/95 ಮತ್ತು SC ಸಂಖ್ಯೆ: 174/95ರ ಪ್ರಕರಣದಲ್ಲಿ ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii)ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳಿಂದ ಈ ಮೂಲಕ ಮುಕ್ತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 39

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಶಾಸ್ತ್ರ ಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಡಾ: ಸೀತಾರಾಮಯ್ಯರವರಿಗೆ ಜೀವನಾಂಶ ಭತ್ಯೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 10.11.2004 ಸಂಖ್ಯೆ: ಆಕುಕ 289 ಎಂಎಂಸಿ 2004ರ ಸರ್ಕಾರಿ ಆದೇಶ.
2) ದಿನಾಂಕ: 15.11.2005 ಸಂಖ್ಯೆ: ಡಿಪಿಜಿ/ಎಂಇ/07/2004-05ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

ಲೋಕಾಯುಕ್ತ ಪೊಲೀಸ್ ನಿರೀಕ್ಷಕರು ಮೈಸೂರು ಆಲನಹಳ್ಳಿ ಬಡವಾಣೆಯ ಶ್ರೀ ಬಿ. ನಾರಾಯಣ ಅವರ ದೂರಿನ ಮೇಲೆ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಡಾ: ಸೀತಾರಾಮಯ್ಯನವರ ವಿರುದ್ಧ ಭ್ರಷ್ಟಾಚಾರ ನಿರೋಧಕ ಅಧಿನಿಯಮ 1988ರ 7, 13, (1) (ಡಿ) ಪ್ರಕರಣದೊಂದಿಗೆ ಓದಲಾದ 13(2)ನೇ ಪ್ರಕರಣದಡಿಯಲ್ಲಿ ಮೊಕದ್ದಮೆ ದಾಖಲಿಸಿಕೊಂಡು ತನಿಖೆ ಕೈಗೊಂಡಿದ್ದರು, ಭ್ರಷ್ಟಾಚಾರ ಆಪಾದನೆ ಅವರ ವಿರುದ್ಧ ಸಾಬೀತಾಗಿದ್ದ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಆರಕ್ಷಕ ಮಹಾನಿರೀಕ್ಷಕರ ಶಿಫಾರಸ್ಸನ್ನು ಅನುಸರಿಸಿ ಅವರನ್ನು ಮೇಲೆ ಒಂದರಲ್ಲಿ ಓದಲಾದ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ 2 ರಲ್ಲಿ ಓದಲಾದ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದೊಂದಿಗಿನ ಮನವಿಯಲ್ಲಿ ಅವರ ಅಮಾನತ್ತಿನ ಅವಧಿಯು ಆರು ತಿಂಗಳಿಗೂ ಹೆಚ್ಚಿನ ಅವಧಿಗೆ ಮುಂದುವರಿದಿರುವುದರಿಂದ ಜೀವನಾಂಶ ಭತ್ಯೆಯನ್ನು ಹೆಚ್ಚಿಸುವಂತೆ ಕೋರಿಕೊಂಡಿರುತ್ತಾರೆ. ಅವರ ಮನವಿಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 289 ಎಂಎಂಸಿ 2004, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2005**

ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾ: ಸೀತಾರಾಮಯ್ಯನವರ ಅಮಾನತ್ತು ಅವಧಿಯು ಆರು ತಿಂಗಳಿಗೂ ಹೆಚ್ಚಿನ ಅವಧಿಗೆ ಮುಂದುವರಿದಿರುವುದರಿಂದ ಅಮಾನತ್ತಿನ ಅವಧಿಯಲ್ಲಿ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದಡಿ ಲಭ್ಯವಾಗುವ ಶೇಕಡ 7 ರಷ್ಟು ಜೀವನಾಂಶ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 28

**ತಿದ್ದುಪಡಿ ಸಂಖ್ಯೆ: ಆಕುಕ 519 ಹೆಚ್‌ಎಸ್‌ಹೆಚ್ 2004, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2005**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ವಿವಿಧ ಆದೇಶಗಳಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ವೈದ್ಯರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ಸಂಖ್ಯೆ: ಸಿಆಸುಇ 73 ಎಸ್‌ಆರ್‌ಡಿ 2000, ದಿನಾಂಕ: 17.5.2003 ರಲ್ಲಿ ಕರ್ನಾಟಕ ನಾಗರೀಕ ಸೇವಾ (ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ವೈದ್ಯಾಧಿಕಾರಿಗಳ ಸೇವೆಯನ್ನು ವಿಲೀನಗೊಳಿಸುವ) (ವಿಶೇಷ) ನಿಯಮಗಳು 2003 ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 409 ಹೆಚ್‌ಎಸ್‌ಹೆಚ್ 2003 ದಿನಾಂಕ: 25.6.2003 ರಲ್ಲಿ ಇವರ ಸೇವೆಯನ್ನು ವಿಲೀನಗೊಳಿಸಿದ್ದು, ಈ ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ: 285 ರಲ್ಲಿ ಡಾ: ಶ್ರೀನಿವಾಸ್ ಜಿ.ಎಸ್. ಇವರ ಜನ್ಮ ದಿನಾಂಕವು ಕಲಂ 3 ರಲ್ಲಿ "22.06.1968" ಕ್ಕೆ ಬದಲಾಗಿ "ದಿನಾಂಕ: 22.09.1968" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

ಪಿ.ಆರ್. 29

**ವಿಷಯ:** ಕೇಂದ್ರ ಪುರಸ್ಕೃತ ಯೋಜನೆಯಡಿ ಸರ್ಕಾರಿ ಕೇಂದ್ರ ಔಷಧಾಗಾರಕ್ಕೆ ಭಾರತ ಸರ್ಕಾರದಿಂದ ಮಂಜೂರಾಗಿರುವ ಹೆಚ್ಚುವರಿ ಅನುದಾನವನ್ನು ಸಂಬಂಧಿಸಿದ ಸಂಸ್ಥೆಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದ ಸಂಖ್ಯೆ: ಭಾವೈಪ 22 ಸಿಎಸ್‌ಎಸ್ 2005-06, ದಿನಾಂಕ: 31.8.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರು ಭಾರತ ಸರ್ಕಾರವು ಆಯುರ್ವೇದ ಸಿದ್ಧ, ಯುನಾನಿ, ಮತ್ತು ಹೋಮಿಯೋಪತಿ ಔಷಧಿಗಳ ಗುಣಮಟ್ಟವನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಔಷಧ ಪರಿವೀಕ್ಷಣಾ ಪ್ರಯೋಗಾಲಯಗಳನ್ನು ಅಭಿವೃದ್ಧಿಪಡಿಸಲು ಕೇಂದ್ರ ಪುರಸ್ಕೃತ ಯೋಜನೆಯಡಿ ಭಾರತ ಸರ್ಕಾರವು ಸರ್ಕಾರಿ ಕೇಂದ್ರ ಔಷಧಾಗಾರಕ್ಕೆ ರೂ.20.24 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಿದ್ದು, ಭಾರತ ಸರ್ಕಾರವು ಮಂಜೂರು ಮಾಡಿರುವ ಹಣವು ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿದ್ದು, ಈ ಬಗ್ಗೆ ಆರ್ಥಿಕ ಇಲಾಖೆಯು "ಕ್ರೆಡಿಟ್ ಕನ್‌ಫರ್‌ಮೇಷನ್ ಸ್ಲಿಪ್" ನೀಡಿದೆ. ಆದ್ದರಿಂದ ಈ ಹೆಚ್ಚುವರಿ ಅನುದಾನವನ್ನು ಸಂಬಂಧಪಟ್ಟ ಸಂಸ್ಥೆಗೆ ಆದಷ್ಟು ಶೀಘ್ರದಲ್ಲೇ ಬಿಡುಗಡೆ ಮಾಡಲು ಸೂಚಿಸಿರುವುದರಿಂದ ಪ್ರಸಕ್ತ ಸಾಲಿನ ಅನುದಾನವನ್ನು ಲೆಕ್ಕ ಶೀರ್ಷಿಕೆ 2210-05-101-3-01 ಯೋಜನೆ ಉಪ ಲೆಕ್ಕ ಶೀರ್ಷಿಕೆ: 101 ಸಹಾಯಾನುದಾನದ ಅಡಿಯಲ್ಲಿ ರೂ.20.24 ಲಕ್ಷ (ಇಪ್ಪತ್ತು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಸರ್ಕಾರಿ ಕೇಂದ್ರ ಔಷಧಾಗಾರ, ಬೆಂಗಳೂರು ಇವರಿಗೆ ಬಿಡುಗಡೆ ಮಾಡುವಂತೆ ಹಾಗೂ ಈ ಅನುದಾನವನ್ನು ಸಹಾಯಾನುದಾನದ ಬಿಲ್ಲಿನಲ್ಲಿ ಡ್ರಾ ಮಾಡಲು ಅನುಮತಿ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿರುವ ವಿವರ ಈ ಕೆಳಗಿನಂತಿದೆ:

| ಕ್ರಮ ಸಂಖ್ಯೆ | ಕೇಂದ್ರ ಸರ್ಕಾರದಿಂದ ಹಣ ಬಿಡುಗಡೆ ಪತ್ರದ ವಿವರ | ಅನುದಾನ ಪಡೆದ ಸಂಸ್ಥೆ | ಅನುದಾನದ ಮೊತ್ತ ರೂ.ಲಕ್ಷಗಳಲ್ಲಿ | ಆರ್ಥಿಕ ಇಲಾಖೆಯು ಸಿ ಸಿ ಸ್ಲಿಪ್ ನೀಡಿದ ದಿನಾಂಕ |
|---|---|---|---|---|
| 1 | ಸಂಖ್ಯೆ: ಜಡ್-12016 61:2003-ಡಿಸಿಸಿ (ಆಯುಷ್), ಭಾರತ ಸರ್ಕಾರ, ಆಯುಷ್ ಇಲಾಖೆ, ದಿನಾಂಕ: 31.3.2005. | ಸರ್ಕಾರಿ ಕೇಂದ್ರೀಯ ಔಷಧಾಗಾರ, ಬೆಂಗಳೂರು ಔಷಧ ಪರಿವೀಕ್ಷಣಾ ಪ್ರಯೋಗಾಲಯಗಳ ಅಭಿವೃದ್ಧಿಪಡಿಸಲು | ರೂ.20.24 ಲಕ್ಷ | 17.5.2005 |

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 235 ಪಿಟಿಡಿ 2005, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ: 2210-05-101-3-01 ಯೋಜನೆ ಉಪ ಲೆಕ್ಕ ಶೀರ್ಷಿಕೆ: 101 ಸಹಾಯಾನುದಾನ ಯೋಜನೆಯಡಿಯಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿ ಭಾರತ ಸರ್ಕಾರದಿಂದ ಮಂಜೂರಾಗಿರುವ ಹಣವನ್ನು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಸರ್ಕಾರಿ ಕೇಂದ್ರ ಔಷಧಾಗಾರ, ಬೆಂಗಳೂರು ಇವರಿಗೆ ಉದ್ದೇಶಿತ ಯೋಜನೆಯ ವಿನಿಯೋಗಕ್ಕೆ ರೂ.20.24 ಲಕ್ಷಗಳನ್ನು (ಇಪ್ಪತ್ತು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಹಾಗೂ ಈ ಅನುದಾನವನ್ನು ಸಹಾಯಾನುದಾನದ ಬಿಲ್ಲಿನಲ್ಲಿ ಡ್ರಾ ಮಾಡಲು ಸಹ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1300 ಅಂಅಸ 2005, ದಿನಾಂಕ: 19.11.2005ರ ಸಹಮತಿಯ ಮೇರೆಗೆ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 30 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಮುರಳಿಮೋಹನ್, ಶ್ರೀ ಹೆಚ್.ಬಿ. ಶಂಕರಪ್ಪ ಮತ್ತು ಶ್ರೀ ಪಿ.ಜಿ. ಶ್ರೀಹರಿ, ಕಿರಿಯ ಇಂಜಿನಿಯರ್‌ಗಳು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 81 ಎಸ್‌ಇಎನ್ 01 ದಿನಾಂಕ: 19.04.2002.
2) ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರ ದಿ:18.03.2004ರ ವಿಚಾರಣಾ ವರದಿ.
3) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 81 ಎಸ್‌ಇಎನ್ 01 ದಿನಾಂಕ: 20.05.2004.
4) ಶ್ರೀ ಬಿ. ರಾಜಣ್ಣ, ಕೆಎಎಸ್ ಅಧಿಕಾರಿ ಅವರ ದಿನಾಂಕ: 17.07.2004ರ ಉತ್ತರ.
5) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 81 ಎಸ್‌ಇಎನ್ 01 ದಿನಾಂಕ:03.08.2005.
6) ಶ್ರೀ ಎಂ.ಎಸ್.ಮುರಳಿಮೋಹನ್, ಕಿರಿಯ ಇಂಜಿನಿಯರ್ ಅವರ ಉತ್ತರ ದಿನಾಂಕ:17.10.2005.
7) ಶ್ರೀ ಹೆಚ್.ಬಿ.ಶಂಕರಪ್ಪ, ಕಿರಿಯ ಇಂಜಿನಿಯರ್ ಅವರ ಉತ್ತರ ದಿನಾಂಕ:17.10.2005.
8) ಶ್ರೀ ಪಿ.ಜಿ.ಶ್ರೀಹರಿ, ಕಿರಿಯ ಇಂಜಿನಿಯರ್ ಅವರ ಉತ್ತರ ದಿನಾಂಕ:17.10.2005.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಚಳ್ಳಕೆರೆ ತಾಲ್ಲೂಕು ಪಂಚಾಯತ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಡಾ. ಅಂಬೇಡ್ಕರ್ ವಸತಿ ಯೋಜನೆಯಡಿ ಫಲಾನುಭವಿಗಳಿಗೆ ಹಣ ವಿತರಿಸುವಲ್ಲಿ ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿಲಾಗಿ ದೆಯೆಂಬ ಮತ್ತು ಸರ್ಕಾರಿ ಹಣ ದುರುಪಯೋಗ ಮಾಡಲಾಗಿದೆಯೆಂಬ ಆರೋಪಕ್ಕಾಗಿ ಈ ಮುಂದೆ ತಿಳಿಸಿದ ಅಧಿಕಾರಿ/ನೌಕರರುಗಳ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಮೇಲೆ (1)ರಲ್ಲಿ ಓದಲಾದ ದಿನಾಂಕ 19.4.2002ರ ಆದೇಶದಲ್ಲಿ ಚಿತ್ರದುರ್ಗ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1) ಶ್ರೀ ಬಿ.ರಾಜಣ್ಣ, ಕೆಎಎಸ್,
2) ಶ್ರೀ ಎಂ.ಎಸ್.ಮುರಳಿ ಮೋಹನ್, ಕಿರಿಯ ಅಭಿಯಂತರರು,
3) ಶ್ರೀ ಹೆಚ್.ಬಿ. ಶಂಕರಪ್ಪ, ಕಿರಿಯ ಅಭಿಯಂತರರು,
4) ಶ್ರೀ ಪಿ.ಜಿ. ಶ್ರೀಹರಿ, ಕಿರಿಯ ಅಭಿಯಂತರರು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 18.3.2004 ರಂದು ವಿಚಾರಣಾ ವರದಿ ಸಲ್ಲಿಸಿ ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

"ವಿಚಾರಣಾಧಿಕಾರಿಗಳು ಆರೋಪಿತ ಅಧಿಕಾರಿ/ನೌಕರರುಗಳು ಮಂಡಿಸಲಾದ ಎಲ್ಲಾ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಎಂ.ಎಸ್.ಮುರಳಿ ಮೋಹನ್, ಶ್ರೀ ಹೆಚ್.ಬಿ.ಶಂಕರಪ್ಪ ಮತ್ತು ಶ್ರೀ ಪಿ.ಜಿ.ಶ್ರೀಹರಿ, ಕಿರಿಯ ಇಂಜಿನಿಯರ್‌ಗಳು ಅವರುಗಳ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು, ದುರುಪಯೋಗವಾಗಿದೆಯೆಂಬ ರೂ.36,000/-ಗಳನ್ನು ಫಲಾನುಭವಿಗಳಿಗೆ ವಿತರಿಸಿರುತ್ತಾರೆಂದು ವರದಿ ನೀಡಿರುತ್ತಾರೆ. ಇನ್ನೊಬ್ಬ ಆಪಾದಿತರಾದ ತಾಲ್ಲೂಕು ಪಂಚಾಯತ್ ಕಾರ್ಯ ನಿರ್ವಹಣಾಧಿಕಾರಿಯಾದ ಶ್ರೀ ಬಿ. ರಾಜಣ್ಣ, ಕೆಎಎಸ್ ಅಧಿಕಾರಿ ಅವರು ಯಾವುದೇ ಅಕ್ರಮವನ್ನು ಎಸಗಿಲ್ಲವೆಂದು, ಆದರೆ ಫಲಾನುಭವಿಗಳಿಗೆ ಹಣವನ್ನು ಚೆಕ್ ಮೂಲಕ ವಿತರಿಸುವ ಪದ್ಧತಿಯನ್ನು ಪಾಲಿಸದೇ ನಗದು ರೂಪದಲ್ಲಿ ಪಾವತಿಸಿರುವಲ್ಲಿ ಕರ್ತವ್ಯ ಲೋಪ ಎಸಗಿರುತ್ತಾರೆಂದು ತಮ್ಮ ನಿರ್ಣಯದಲ್ಲಿ ತಿಳಿಸಿರುತ್ತಾರೆ."

ವಿಚಾರಣಾ ವರದಿಯನ್ವಯ ಒಂದನೇ ಆರೋಪಿತ ಅಧಿಕಾರಿಯಾದ ಶ್ರೀ ಬಿ. ರಾಜಣ್ಣ ಅವರ ವಿರುದ್ಧದ ಆರೋಪವು ಸಾಬೀತಾಗಿದೆಯೆಂದು ನಿರ್ಣಯ ನೀಡಿರುವ ಪ್ರಯುಕ್ತ ವಿಚಾರಣಾ ವರದಿಯನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ: 20.5.2004ರ ನೋಟೀಸಿನಲ್ಲಿ ವರದಿಯ ಪ್ರತಿಯನ್ನು ಒದಗಿಸಿ ಅವರ ಹೇಳಿಕೆಗೆ ಅವಕಾಶ ನೀಡಲಾಯಿತು.

ಶ್ರೀ ಎಂ.ಎಸ್.ಮುರಳಿ ಮೋಹನ್, ಶ್ರೀ ಹೆಚ್.ಬಿ.ಶಂಕರಪ್ಪ ಮತ್ತು ಶ್ರೀ ಪಿ.ಜಿ.ಶ್ರೀಹರಿ, ಕಿರಿಯ ಅಭಿಯಂತರರುಗಳು ಈ ಕೆಳಕಂಡಂತೆ ಕ್ರಮವಹಿಸಿದ್ದರಿಂದಾಗಿ ಅವರುಗಳಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನೀಡಿದ ನಿರ್ಣಯವನ್ನು ಈ ಕೆಳಕಂಡ ಕಾರಣದ ಮೇರೆಗೆ ಒಪ್ಪದೇ ಇರಲು ತೀರ್ಮಾನಿಸಿ ಅವರುಗಳಿಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ:03.08.2005ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು.

"The fact that the vouchers were not produced at the time of audit, but were produced subsequently shows that the amount may have been misappropriated temporarily."

ಶ್ರೀ ಬಿ.ರಾಜಣ್ಣ ಅವರು ದಿನಾಂಕ:17.07.2004 ಉತ್ತರ ಸಲ್ಲಿಸಿ, ಚಳ್ಳಕೆರೆ ತಾಲ್ಲೂಕಿನ ಹಲವಾರು ಗ್ರಾಮಗಳಲ್ಲಿ ಬ್ಯಾಂಕಿನ ಸೌಕರ್ಯವಿಲ್ಲದೆ ಇದ್ದು ಹಾಗೂ ಅವರಿಗೆ ಸಲ್ಲುವ ಅಲ್ಪ ಮೊತ್ತದಲ್ಲಿ ಸುಮಾರು ರೂ.500 ರಿಂದ 1,000 ರೂ.ಗಳವರೆಗೆ ಬ್ಯಾಂಕುಗಳಲ್ಲಿ ಖಾತೆ ತೆಗೆಯಲು ಫಲಾನುಭವಿಗಳಿಗೆ ವೆಚ್ಚವಾಗುತ್ತಿದ್ದುದರಿಂದ, ಈ ಬಗ್ಗೆ ಫಲಾನುಭವಿಗಳು ನಗದು ರೂಪದಲ್ಲಿ ಹಣ ವಿತರಿಸಲು ಕೋರಿದ್ದರ ಮೇರೆಗೆ ಮತ್ತು ಆಡಳಿತಾತ್ಮಕ ಮತ್ತು ಸ್ಥಳೀಯ ಸಮಸ್ಯೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಹಣವನ್ನು ಚೆಕ್ ಮೂಲಕ ವಿತರಿಸದೇ ನಗದು ರೂಪದಲ್ಲಿ ವಿತರಿಸಲಾಗಿದೆಯೆಂದು ತಿಳಿಸಿರುತ್ತಾರೆ ಹಾಗೂ ಯಾವುದೇ ಫಲಾನುಭವಿಗಳು ಅವರುಗಳಿಗೆ ಸಲ್ಲಬಹುದಾದ ಮೊತ್ತ ಸಿಗಲಿಲ್ಲವೆಂದು ಅವರುಗಳಿಂದ ಯಾವುದೇ ದೂರೂ ಸಹ ಇಲ್ಲವೆಂದು ತಿಳಿಸಿರುತ್ತಾರೆ. ಈ ರೀತಿಯ ದೂರು

ಇಲ್ಲವೆಂಬುದನ್ನು ವಿಚಾರಣಾಧಿಕಾರಿಯವರು ತಮ್ಮ ವಿಚಾರಣಾ ವರದಿಯಲ್ಲಿಯೂ ಸಹ ಧೃಡೀಕರಿಸಿರುತ್ತಾರೆ. ಅದಲ್ಲದೆ, ಈ ನಗದು ಹಣಕ್ಕೆ ಕಿರಿಯ ಅಭಿಯಂತರರನ್ನೇ ಸಾಕ್ಷಿದಾರರನ್ನಾಗಿ ಮಾಡಿ ಸ್ಥಳೀಯ ಚುನಾಯಿತ ಪ್ರತಿನಿಧಿಗಳ ಎದುರು ವಿತರಿಸಿರುವುದರಿಂದ ಯಾವುದೇ ದುರ್ನಡತೆ ಎಸಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಇಂತಹ ಪದ್ಧತಿಯನ್ನು ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕು ಪಂಚಾಯಿತಿಗಳಲ್ಲಿಯೂ ಸಹ ಅನುಸರಿಸುತ್ತಿದ್ದುದ್ದರಿಂದ ತಾವೂ ಸಹ ಅದೇ ಪದ್ಧತಿಯನ್ನು ಅನುಸರಿಸಿರುವುದರಿಂದ ಹೀಗಾಗಿ ತಾವು ಯಾವುದೇ ಕಾರಣದಿಂದ ದುರ್ನಡತೆ ಎಸಗಿರುವುದಿಲ್ಲ ವಾದ್ದರಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ಎಂ.ಎಸ್.ಮುರಳಿ ಮೋಹನ್, ಶ್ರೀ ಹೆಚ್.ಬಿ.ಶಂಕರಪ್ಪ ಮತ್ತು ಶ್ರೀ ಪಿ.ಜಿ.ಶ್ರೀಹರಿ ಅವರುಗಳು ದಿನಾಂಕ: 17.10.2005ರಂದು ಅವರುಗಳು ಉತ್ತರ ಸಲ್ಲಿಸಿ ಅಂಬೇಡ್ಕರ್ ವಸತಿ ಯೋಜನೆಯಲ್ಲಿ ಸಲ್ಲಿಸಬೇಕಾದ ಸೇವೆಯನ್ನು ಮಾತ್ರ ಮಾಡಿರುತ್ತೇವೆಂದು ತಿಳಿಸಿ ಫಲಾನುಭವಿಗಳು ಮನೆಗಳನ್ನು ಕಟ್ಟಿಕೊಂಡಿದ್ದನ್ನು ಪರಿವೀಕ್ಷಿಸಿ ಅವರಿಗೆ ತಲುಪಬೇಕಾದ ಬಿಲ್ ಕೊಟ್ಟು ಅದನ್ನು ಬಿ.ಡಿ.ಒ. ಮತ್ತು ಕಾರ್ಯ ನಿರ್ವಹಣಾ ಅಧಿಕಾರಿಯವರು ಪರಿವೀಕ್ಷಿಸಿ ಬಿಲ್ಲನ್ನು ಪಾಸು ಮಾಡಿದ ಮೇಲೆ ಹಣವನ್ನು ಸಂಬಂಧಪಟ್ಟ ಫಲಾನುಭವಿಗಳಿಗೆ ವಿತರಿಸಲು ಮಾತ್ರ ನಮಗೆ ಕೊಟ್ಟಿರುವುದರಿಂದ ಅದರಂತೆ ಆ ಹಣವನ್ನು ಸಂಬಂಧಪಟ್ಟ ಫಲಾನುಭವಿಗಳಿಗೆ ವಿತರಿಸಿ ವೋಚರ್ ಮೇಲೆ ಸಹಿ ಪಡೆದು ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ವೋಚರ್‌ಗಳನ್ನು ಹಿಂತಿರುಗಿಸುವ ಪದ್ಧತಿಯ ಪ್ರಕಾರ ವಿಷಯ ನಿರ್ವಾಹಕರಿಗೆ ಹಿಂತಿರುಗಿಸಿ ಅವರುಗಳಿಂದ ಸೀಕೃತಿಯನ್ನು ಪಡೆಯಲಾಗಿದೆಯೆಂದು ತಿಳಿಸಿರುತ್ತಾರೆ. ಇದರಿಂದಾಗಿ ಯಾವುದೇ ರೀತಿಯಲ್ಲಿ ಹಣವನ್ನು ದುರುಪಯೋಗ ಪಡಿಸಿಕೊಂಡಿಲ್ಲವೆಂದು ವಿವರಣೆ ನೀಡಿದ್ದಾರೆ. ಹಾಗೂ ಲೆಕ್ಕಪತ್ರಗಳ ತಪಾಸಣೆಯ ಸಮಯಕ್ಕಿಂತ ಮುಂಚೆಯೇ ವೋಚರ್‌ಗಳನ್ನು ಕಛೇರಿ ಸಿಬ್ಬಂದಿಗೆ ಹಿಂತಿರುಗಿಸಿರುತ್ತಾರೆಂದು ತಿಳಿಸುತ್ತಾ, ತಾವುಗಳು ಸದರಿ ಕಛೇರಿಯಿಂದ ತಪಾಸಣೆಗಿಂತ ಮುಂಚಿತವಾಗಿಯೇ ವರ್ಗಾವಣೆಗೊಂಡಿರುವುದರಿಂದ ತಮ್ಮನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿರುತ್ತಾರೆ.

ಆರೋಪಿತರುಗಳು ನೀಡಲಾದ ಉತ್ತರಗಳ ಬೆಳಕಿನಲ್ಲಿ ವಿಚಾರಣಾ ವರದಿಯೊಂದಿಗೆ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಯಿತು. ಒಂದನೇ ಆರೋಪಿತ ಅಧಿಕಾರಿಯಾದ ಶ್ರೀ ಬಿ.ರಾಜಣ್ಣ ಅವರು ನೀಡಿದ ಉತ್ತರವನ್ನು ಪರಿಶೀಲಿಸಲಾಗಿ, ಹಣದ ವಿತರಣೆಯಲ್ಲಿ ಯಾವುದೇ ಅಕ್ರಮ ನಡೆದಿಲ್ಲವೆಂದು ಮತ್ತು ಈ ಬಗ್ಗೆ ಯಾವುದೇ ದೂರುಗಳಿಲ್ಲವೆಂಬ ಅಂಶ ದೃಢಪಟ್ಟರೂ ಸಹ ಸರ್ಕಾರವು ದಿನಾಂಕ:29.04.1997ರಂದು ಆದೇಶವೊಂದನ್ನು ಹೊರಡಿಸಿ ಅದರಲ್ಲಿ ಫಲಾನುಭವಿಗಳಿಗೆ ಹಣವನ್ನು ಇನ್ನು ಮುಂದೆ ಚೆಕ್ ಮೂಲಕ ನೀಡಲು ನಿರ್ದೇಶನ ನೀಡಿದ್ದರೂ ಸಹ 1997ರ ಮೇ ಮತ್ತು ಜೂನ್ ತಿಂಗಳಲ್ಲಿ ಹಣವನ್ನು ನಗದು ಮೂಲಕ ಪಾವತಿಸಿರುತ್ತಾರೆ. ಆಡಳಿತಾತ್ಮಕ ಹಿತದೃಷ್ಟಿಯಿಂದ ಸ್ಥಳೀಯ ಸಮಸ್ಯೆಗಳನ್ನು ಹಾಗೂ ಫಲಾನುಭವಿಗಳ ಇಚ್ಛೆಯನ್ನು ಗಮನದಲ್ಲಿಟ್ಟುಕೊಂಡು ಹಣವನ್ನು ನಗದು ಮೂಲಕ ವಿತರಿಸಲಾಗಿದೆಯೆಂದು, ಇದೇ ಪದ್ಧತಿ ಜಿಲ್ಲೆಯ ಇತರೆ ತಾಲ್ಲೂಕುಗಳಲ್ಲೂ ಅನುಸರಿಸಲಾಗಿದೆಯೆಂಬ ಅವರ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಈ ಮಟ್ಟಿಗೆ ಅವರ ಲೋಪ ಗೋಚರವಾಗುತ್ತದೆ.

ಇನ್ನಿತರೆ ಆರೋಪಿತರಾದ ಕಿರಿಯ ಅಭಿಯಂತರರುಗಳು ತಾಲ್ಲೂಕು ಪಂಚಾಯಿತಿ ಕಛೇರಿಯನ್ನು ಆಡಿಟ್ ನಡೆಯುವುದಕ್ಕಿಂತ ಮುಂಚೆ ವೋಚರುಗಳನ್ನು ಕಛೇರಿಗೆ ಹಿಂತಿರುಗಿಸಿರುವುದು ಕಂಡು ಬರುತ್ತದೆ. ಈ ವೋಚರುಗಳನ್ನು ಸಕಾಲದಲ್ಲಿ ಕಛೇರಿ ಸಿಬ್ಬಂದಿಯು ಆಡಿಟ್ ಸಮಯದಲ್ಲಿ ಹಾಜರು ಪಡಿಸದೇ ಇರುವುದಕ್ಕೆ ಇವರುಗಳನ್ನು ಜವಾಬ್ದಾರರನ್ನಾಗಿ ಮಾಡುವುದು ಸರಿಯಲ್ಲ. ವಿಚಾರಣಾ ವರದಿಯಲ್ಲೂ ಸಹ ಹಣ ದುರುಪಯೋಗವಾಗಿಲ್ಲವೆಂದು ತಿಳಿದು ಬರುತ್ತದೆ. ಬಿ.ಡಿ.ಓ ಮತ್ತು ಕಾರ್ಯ ನಿರ್ವಹಣಾಧಿಕಾರಿಗಳು ಬಿಲ್ಲನ್ನು ಪರಿವೀಕ್ಷಿಸಿ ವಾಪಸು ಮಾಡಿದ ಮೇಲೆ ಸದರಿ ಹಣವನ್ನು ಫಲಾನುಭವಿಗಳಿಗೆ ಕೊಟ್ಟ ವೋಚರ್ ಮೇಲೆ ಸಹಿ ಪಡೆದು ಫಲಾನುಭವಿಗಳಿಂದ ಸಹಿ ಪಡೆದ ವೋಚರ್‌ಗಳನ್ನು ಸಹ ಗಮನಿಸಲಾಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 81 ಎಸ್ಇಎನ್ 2001 ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ವಾಗ್ದಂಡನೆ (Censure) ವಿಧಿಸುತ್ತದೆ.

ಕಿರಿಯ ಇಂಜಿನಿಯರ್‌ಗಳಾದ ಶ್ರೀ ಎಂ.ಎಸ್.ಮುರಳಿ ಮೋಹನ್, ಶ್ರೀ ಹೆಚ್.ಬಿ.ಶಂಕರಪ್ಪ ಮತ್ತು ಶ್ರೀ ಪಿ.ಜಿ.ಶ್ರೀಹರಿ ಅವರುಗಳ ಮೇಲೆ ಹೊರಿಸಲಾದ ಆರೋಪಗಳಿಂದ ಅವರುಗಳನ್ನು ಆರೋಪ ಮುಕ್ತರನ್ನಾಗಿಸುತ್ತದೆ.

ಈ ಪ್ರಕರಣದ ಮಟ್ಟಿಗೆ ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಎಂ.ಎಸ್.ಮುರಳಿ ಮೋಹನ್, ಶ್ರೀ ಹೆಚ್.ಬಿ.ಶಂಕರಪ್ಪ ಮತ್ತು ಶ್ರೀ ಪಿ.ಜಿ.ಶ್ರೀಹರಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 24

**ವಿಷಯ:** ಶ್ರೀ ಹೆಚ್.ಎಂ.ಮಲ್ಲಿಕಾರ್ಜುನ ಸ್ವಾಮಿ, ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಲಾ/ಎಲ್ಎಸ್(ಎ)91/2002 ದಿನಾಂಕ:22.08.2003.
2) ಕಾನೂನು ಇಲಾಖೆ ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿ ದಿನಾಂಕ:07.12.2004.
3) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 109 ಎಸ್ಇಎನ್ 2005 ದಿನಾಂಕ: 10.10.2005.
4) ಶ್ರೀ ಹೆಚ್.ಎಂ.ಮಲ್ಲಿಕಾರ್ಜುನ ಸ್ವಾಮಿ, ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ ರವರ ದಿನಾಂಕ:24.10.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಹೆಚ್.ಎಂ.ಮಲ್ಲಿಕಾರ್ಜುನ ಸ್ವಾಮಿ, ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ ಇವರು ಈ ಹಿಂದೆ 1997ರಲ್ಲಿ ಕಾನೂನು ಇಲಾಖೆ ಆಡಳಿತ-2 ಶಾಖೆಯಲ್ಲಿ ಶಾಖಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:07.07.1997ರಂದು ಶಾಖೆಯಲ್ಲಿ ಸ್ವೀಕರಿಸಿದ ಸಾಗರದ ಸಿವಿಲ್ ಜಡ್ಜ್‌ರವರ ತೀರ್ಪಿನ ಪ್ರತಿಯನ್ನು ನಿರ್ವಹಿಸಿ ಒಪ್ಪಿಸದೆ 20 ದಿನಗಳ ಕಾಲ ಕಾಲವಿಳಂಬ ಮಾಡಿದ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:22.08.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ಬಾಲಕೃಷ್ಣ, ಸರ್ಕಾರದ ಅಪರ ಕಾರ್ಯದರ್ಶಿ-3, ಕಾನೂನು ಇಲಾಖೆ ರವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:07.12.2004ರ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಆರೋಪಿತ ಅಧಿಕಾರಿಯ ವಿರುದ್ಧ ಆರೋಪ ಸಾಬೀತಾಗಿದೆಯೆಂದು ವರದಿ ಮಾಡಿರುತ್ತಾರೆ.

ಈ ಬಗ್ಗೆ ಸದರಿ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ:10.10.2005ರ 2ನೇ ಕಾರಣ ಕೇಳುವ ನೋಟೀಸ್ ಜೊತೆಯಲ್ಲಿ ಆರೋಪಿತ ಅಧಿಕಾರಿಗಳಿಗೆ ಒದಗಿಸಲಾಗಿತ್ತು. ಈ ಬಗ್ಗೆ ಆರೋಪಿತ ಅಧಿಕಾರಿಗಳು ಮೇಲೆ (4)ರಲ್ಲಿ ಓದಲಾದ ದಿನಾಂಕ:24.10.2005ರ ತಮ್ಮ ಲಿಖಿತ ಉತ್ತರ ನೀಡಿ ತಮ್ಮ ಮೇಲಿನ ಆರೋಪವನ್ನು ಅಲ್ಲಗೆಳೆದು ತಮ್ಮನ್ನು ಆರೋಪ ಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಮೇಲಿನ ವಿಚಾರಣಾ ವರದಿ ಹಾಗೂ ಆರೋಪಿತರ ಲಿಖಿತ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಹೆಚ್.ಎಂ.ಮಲ್ಲಿಕಾರ್ಜುನ ಸ್ವಾಮಿ ಇವರು ಕಾನೂನು ಇಲಾಖೆಯ ಸ್ವೀಕೃತಿ ಮತ್ತು ರವಾನೆ ಶಾಖೆಯಲ್ಲಿ ಶಾಖಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:07.07.1997ರಂದು ಸಾಗರದ ಸಿವಿಲ್ ಜಡ್ಜ್ ರವರ ನ್ಯಾಯಾಲಯದ ತೀರ್ಪಿನ ಸರ್ಟಿಫೈಡ್ ಪ್ರತಿ ಸಂಖ್ಯೆ:ಎಲ್ಎಸಿ 65/87ನ್ನು ಸ್ವೀಕರಿಸಿದ್ದು ಸಚಿವಾಲಯ ಕೈಪಿಡಿ ಕಂಡಿಕೆ 24 ಮತ್ತು 67ರ ಪ್ರಕಾರ 5 ದಿನಗಳೊಳಗೆ ನಿರ್ವಹಿಸಿ ಒಪ್ಪಿಸದೇ ದಿನಾಂಕ:27.07.1997ರಂದು ಲಿಟಿಗೇಷನ್-1 ಶಾಖೆಗೆ ಕಳುಹಿಸಿದ್ದು, ಇದರಿಂದ 20 ದಿನಗಳ ಕಾಲವಿಳಂಬವಾಯಿತು. ಅಂದರೆ ಸದರಿ ಆದೇಶದ ವಿರುದ್ಧ MFA 4565/2001ರ ಮೇಲ್ಮನವಿ ಸಲ್ಲಿಸಲು ಕಾಲವಿಳಂಬಕ್ಕೆ ಕಾರಣರಾಗಿದ್ದು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3ನ್ನು ಉಲ್ಲಂಘಿಸಿರುವುದು ದೃಢಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 109 ಎಸ್ಇಎನ್ 2005 ಬೆಂಗಳೂರು ದಿನಾಂಕ: 20ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ.ಹೆಚ್.ಎಂ.ಮಲ್ಲಿಕಾರ್ಜುನ ಸ್ವಾಮಿ, ಸರ್ಕಾರದ ಅಧೀನ ಕಾರ್ಯದರ್ಶಿರವರು ಎಸಗಿರುವ ದುರ್ನಡತೆಯ ಸ್ವರೂಪವನ್ನು ಗಮನದಲ್ಲಿರಿಸಿಕೊಂಡು ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8(ii)ರಡಿ "CENSURE" ದಂಡನೆಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 25

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಎಸ್.ಕೆ.ಲಕ್ಷ್ಮಣ್, ಶ್ರೀ ನಾಗರಾಜ್, ಕೆಎಎಸ್ ಅಧಿಕಾರಿಗಳು, ಶ್ರೀ ಎಂ.ಎನ್.ನರಸಿಂಹಮೂರ್ತಿ, ಅಂದಿನ ತಹಶೀಲ್ದಾರ್(ನಿವೃತ್ತ), ಶ್ರೀ ಜೆ.ನರಸಿಂಹಮೂರ್ತಿ,ರಾಜಸ್ವ ನಿರೀಕ್ಷಕರು, ಶ್ರೀ ಗುರುಲಿಂಗಯ್ಯ, ಗ್ರಾಮ ಲೆಕ್ಕಿಗ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 110 ಎಸ್ಇಎನ್ 01(1) ದಿನಾಂಕ:21.05.2004.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 110 ಎಸ್ಇಎನ್ 01(2) ದಿನಾಂಕ:07.11.2005.
3) ವಿಚಾರಣಾಧಿಕಾರಿಯವರ ವರದಿ ದಿನಾಂಕ:07.11.2005.

**ಪ್ರಸ್ತಾವನೆ:**

1991-96ನೇ ಸಾಲಿನ ಅವಧಿಯಲ್ಲಿ ರಾಮನಗರ ತಾಲ್ಲೂಕಿನಲ್ಲಿ ಕೆಲಸ ನಿರ್ವಹಿಸಿದ ಈ ಕೆಳಕಂಡ ಅಧಿಕಾರಿ/ನೌಕರರುಗಳು ಸರ್ಕಾರವು ನಿಗದಿ ಪಡಿಸಿದ ದಿನಾಂಕದ ನಂತರ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ಬಂದಿರುವ ಅರ್ಜಿಗಳನ್ನು ಅನಧಿಕೃತವಾಗಿ ವಹಿಯಲ್ಲಿ ಸೇರ್ಪಡಿಸಿರುವ ಹಾಗೂ ಸಮಿತಿಯ ಮಂಜೂರಾತಿ ಇಲ್ಲದೆ ಕೆಲವು ಪ್ರಕರಣಗಳಲ್ಲಿ ಸಾಗುವಳಿ ಪತ್ರಗಳನ್ನು ವಿತರಿಸಿ ದುರ್ನಡತೆ ಎಸಗಿರುತ್ತಾರೆಂದು ಇದರಿಂದ KIADB ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಅಕ್ರಮ/ಅನಾವಶ್ಯ ಪರಿಹಾರ ನೀಡುವ ಪ್ರಸಂಗ ಕಲ್ಪಿಸಿರುತ್ತಾರೆಂಬ ಆರೋಪಗಳನ್ನು ಹೊರಿಸಲಾಗಿತ್ತು.

1) ಶ್ರೀ ಎಸ್.ಕೆ.ಲಕ್ಷ್ಮಣ್, ಕೆಎಎಸ್, ಅಂದಿನ ತಹಶೀಲ್ದಾರ್,
2) ಶ್ರೀ ನಾಗರಾಜ್, ಕೆಎಎಸ್, ಅಂದಿನ ತಹಶೀಲ್ದಾರ್,
3) ಶ್ರೀ ಎಂ.ಎನ್.ನರಸಿಂಹಮೂರ್ತಿ, ಅಂದಿನ ತಹಶೀಲ್ದಾರ್ (ನಿವೃತ್ತ),
4) ಶ್ರೀ ಜೆ.ನರಸಿಂಹಮೂರ್ತಿ, ರಾಜಸ್ವ ನಿರೀಕ್ಷಕ,
5) ಶ್ರೀ ಗುರುಲಿಂಗಯ್ಯ, ಗ್ರಾಮ ಲೆಕ್ಕಿಗ,
6) ಶ್ರೀ ಮಧು, ದ್ವಿತೀಯ ದರ್ಜೆ ಸಹಾಯಕರು,
7) ಶ್ರೀ ಮೈಕಲ್ ಬೆಂಜಮಿನ್, ದ್ವಿತೀಯ ದರ್ಜೆ ಸಹಾಯಕರು,
8) ಶ್ರೀಮತಿ ಶಬೀನ್ ತಾಜ್, ದ್ವಿತೀಯ ದರ್ಜೆ ಸಹಾಯಕರು,
9) ಶ್ರೀ ಅಬ್ದುಲ್ ಸುಭಾನ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು,
10) ಶ್ರೀ ನರಸಿಂಹಯ್ಯ, ನಿವೃತ್ತ ಗ್ರಾಮ ಲೆಕ್ಕಿಗ.

ಮೇಲ್ಕಂಡ ಅಧಿಕಾರಿ/ನೌಕರರುಗಳಿಗೆ ನಿಯಮಾನುಸಾರ ದೋಷಾರೋಪಣೆಗಳನ್ನು ಜಾರಿ ಮಾಡಿ ಸಮಜಾಯಿಷಿಯನ್ನು ಕೇಳಲಾಗಿತ್ತು. ಆದರೆ, ಈ ಎಲ್ಲಾ ಅಧಿಕಾರಿ/ನೌಕರರುಗಳು ಅವರ ಮೇಲಿನ ದೋಷಾರೋಪಣೆಗಳನ್ನು ನಿರಾಕರಿಸಿದ್ದರಿಂದ ಮೇಲೆ (1) ಮತ್ತು (2)ರಲ್ಲಿ ಓದಲಾದ ಆದೇಶಗಳಲ್ಲಿ ಇವರುಗಳ ವಿರುದ್ಧ ಹೊರಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಆರೋಪಗಳ ಕುರಿತು ವಿಚಾರಣೆ ನಡೆಸಲು ನಿವೃತ್ತ ನ್ಯಾಯಾಧೀಶರಾದ ಶ್ರೀ ಎಂ.ಎಸ್. ನಟರಾಜಮೂರ್ತಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆಯನ್ನು ಪೂರ್ತಿಗೊಳಿಸಿದ ವಿಚಾರಣಾಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ದಿನಾಂಕ:07.11.05ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಯವರ ವರದಿಯಲ್ಲಿ ಮೇಲ್ಕಂಡ ಎಲ್ಲಾ ಅಧಿಕಾರಿ/ನೌಕರರುಗಳ ವಿರುದ್ಧ ಹೊರಿಸಲಾದ ದೋಷಾರೋಪಣೆಗಳು ಋಜುವಾತಾಗಿಲ್ಲವೆಂದು ತಿಳಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಪ್ರಧಾನ ಸಾಕ್ಷಿ ಶ್ರೀ ರುದ್ರಪ್ಪನವರ ಹೇಳಿಕೆಯನ್ನು ಬಿಟ್ಟರೆ ಉಳಿದ ಯಾವುದೇ ಸಾಕ್ಷಿಗಳು ಉಪಯುಕ್ತಕರ ಹೇಳಿಕೆ ನೀಡಿಲ್ಲವೆಂದು, ಕ್ರಮಬದ್ಧವಾಗಿ ಸ್ವೀಕರಿಸಿದ ಅರ್ಜಿಗಳನ್ನು ವಹಿಯಲ್ಲಿ ಸೇರ್ಪಡೆ ಮಾಡದಿದ್ದಲ್ಲಿ ಅವುಗಳನ್ನು ತದನಂತರ ಸೇರಿಸಿರುವುದರಲ್ಲಿ ತಪ್ಪು ಏನು ಇರುವುದಿಲ್ಲವೆಂದು, ಕಛೇರಿಯಲ್ಲಿ 5,566 ಅರ್ಜಿಗಳನ್ನು ಸ್ವೀಕರಿಸಿದ್ದು, ಆ ಪೈಕಿ 5,344 ಅರ್ಜಿಗಳು ಮಾತ್ರ ವಹಿಯಲ್ಲಿ ದಾಖಲು ಮಾಡಲ್ಪಟ್ಟಿದ್ದು ಉಳಿದ 338 ಅರ್ಜಿಗಳು ತಾಲ್ಲೂಕು ಕಛೇರಿಯಲ್ಲೇ ಇದ್ದವೆಂದು ವರದಿಯಾಗಿರುವುದರಿಂದ ನಿಗದಿತ ಸಮಯದಲ್ಲಿ ಬಂದ ಅರ್ಜಿಗಳನ್ನು ವಹಿಯಲ್ಲಿ ನಮೂದಿಸುವಲ್ಲಿ ಏರುಪೇರು ಆಗಿರುವುದು ತಿಳಿಯುತ್ತದೆಯೆಂದು, ಸಮಿತಿಯ ನಿರ್ಣಯವಿಲ್ಲದೆ ಸಾಗುವಳಿ ಚೀಟಿ ವಿತರಿಸಿರುವುದಕ್ಕೆ ಸಾಕ್ಷ್ಯಾಧಾರಗಳಿರುವುದಿಲ್ಲವೆಂದು, ಪ್ರಧಾನ ಸಾಕ್ಷಿ ಶ್ರೀ ರುದ್ರಪ್ಪ ರವರು ವಹಿಯಲ್ಲಿನ ಅನರ್ಹ ಅಥವಾ ಪ್ರಶ್ನಿತ ಎಂಟ್ರಿಗಳ ಬರವಣಿಗೆ ಯಾರದೆಂದು ಈ ಸೇರ್ಪಡೆಗೆ ಯಾರು ಕಾರಣರೆಂದು ಗುರುತಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆಂದು, ಕೆಲವು ಸೇರ್ಪಡೆಗಳನ್ನು ಗಮನಿಸಲಾಗಿ ಅವು ಒಂದೇ ರೀತಿಯ ಬರವಣಿಗೆಯಾಗಿದ್ದು ಮಧ್ಯ ತಿದ್ದುಪಡಿ ಅಥವಾ ಅಂತರಗಳು ಕಾಣುವುದಿಲ್ಲವಾದ್ದರಿಂದ ಅನುಮಾನಕ್ಕೆ ಆಧಾರವಿಲ್ಲವೆಂದು ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸುತ್ತಾ, ಈ ಎಲ್ಲಾ ಸಾಕ್ಷ್ಯಾಧಾರಗಳು ಆರೋಪಿತರ ವಿರುದ್ಧ ಮಾಡಲಾದ ಯಾವುದೇ ಆರೋಪಗಳನ್ನು ಋಜುವಾತು ಪಡಿಸುವಲ್ಲಿ ವಿಫಲವಾಗಿರುತ್ತದೆಂದು ವರದಿಸಿದ್ದಾರೆ.

ಮೇಲ್ಕಂಡ ವಿಚಾರಣಾ ವರದಿ, ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ ವಿಚಾರಣಾಧಿಕಾರಿಯವರು ಆರೋಪಿತರ ಹೇಳಿಕೆಯ ಬಗ್ಗೆ ಸವಿವರವಾಗಿ ವಿಚಾರಣೆ ನಡೆಸಬಹುದಾಗಿತ್ತು. ಕೇವಲ ಸಾಕ್ಷಿಗಳ ಹೇಳಿಕೆ ಅನುಕೂಲವಾಗಲಾರದು ಮತ್ತು ಕ್ರಮಬದ್ಧವಾಗಿ ಸ್ವೀಕರಿಸಿದ ಅರ್ಜಿಗಳನ್ನು ವಹಿಯಲ್ಲಿ ನಂತರ ಸೇರಿಸಿರುವುದರಲ್ಲಿ ತಪ್ಪೇನೂ ಇಲ್ಲವೆಂಬ ಚುಟುಕು ವರದಿಯು ಅಷ್ಟು ಸೂಕ್ತವಾಗಿ ಕಾಣುತ್ತಿಲ್ಲ. ಕೆಲವೊಂದು ಅರ್ಜಿಗಳು ವಹಿಯಲ್ಲಿ ದಾಖಲಾಗದೆ ತಾಲ್ಲೂಕು ಕಛೇರಿಯಲ್ಲೇ ಇರುವುದರ ಬಗ್ಗೆ ಮತ್ತು ಎಲ್ಲಾ ಸಕ್ರಮವಾಗಿದ್ದಲ್ಲಿ ಉಪ ವಿಭಾಗಾಧಿಕಾರಿಗಳು ಕೆಲವೊಂದು ಮಂಜೂರಾತಿಗಳನ್ನು ಏಕೆ ರದ್ದುಗೊಳಿಸಿದ್ದಾರೆ ಎಂಬ ಬಗ್ಗೆ ವಿಚಾರಣಾಧಿಕಾರಿಯವರ ವರದಿಯಲ್ಲಿ ಪರಿಶೀಲನೆ ಮಾಡಿಲ್ಲ. ಈ ಪ್ರಕರಣದಲ್ಲಿನ ಗೊಂದಲಗಳಿಗೆ ಎಲ್ಲಾ ಅಧಿಕಾರಿಗಳು/ನೌಕರರುಗಳು ಒಂದಲ್ಲ ಒಂದು ರೀತಿಯಲ್ಲಿ ಅವರ ನಿರ್ಲಕ್ಷ್ಯವನ್ನು ಪ್ರದರ್ಶಿಸಿರುವುದು ಕಂಡು ಬರುತ್ತದೆ. ಆದಾಗ್ಯೂ ಈ ಪ್ರಕರಣದಲ್ಲಿ ಮಂಜೂರಾದ ಕೆಲವು ಸಾಗುವಳಿ ಪ್ರಕರಣಗಳನ್ನು ರಾಮನಗರ ಉಪ ವಿಭಾಗಾಧಿಕಾರಿಗಳು ಅವರ ಆದೇಶ ದಿನಾಂಕ:21.10.01ರ ಆದೇಶದಲ್ಲಿ ರದ್ದುಗೊಳಿಸಿರುವುದನ್ನು ಮತ್ತು ಈ ಪ್ರಕರಣವು ಸುಮಾರು 15 ವರ್ಷಗಳ ಹಿಂದಿನ ಅವಧಿಯದ್ದಾಗಿದ್ದು, ಈ ಬಗ್ಗೆ ಪುನ: ವಿಚಾರಣೆ ನಡೆಸಿದರೂ ಸಹ ಫಲಪ್ರದವಾಗುವ ಸಾಧ್ಯತೆಗಳಿರುವುದಿಲ್ಲವೆಂಬುದನ್ನು ಮನಗಂಡು ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 01 ಬೆಂಗಳೂರು ದಿನಾಂಕ: 28ನೇ ಡಿಸೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಸ್.ಕೆ.ಲಕ್ಷ್ಮಣ್, ಕೆಎಎಸ್, ಅಂದಿನ ತಹಶೀಲ್ದಾರ್, ಶ್ರೀ ನಾಗರಾಜ್, ಕೆಎಎಸ್, ಅಂದಿನ ತಹಶೀಲ್ದಾರ್, ಶ್ರೀ ಎಂ.ಎಸ್.ನರಸಿಂಹಮೂರ್ತಿ, ಅಂದಿನ ತಹಶೀಲ್ದಾರ್ (ನಿವೃತ್ತ), ಶ್ರೀ ಜೆ.ನರಸಿಂಹಮೂರ್ತಿ, ರಾಜಸ್ವ ನಿರೀಕ್ಷಕ, ಶ್ರೀ ಗುರುಲಿಂಗಯ್ಯ, ಗ್ರಾಮ ಲೆಕ್ಕಿಗ, ಶ್ರೀ ಮಧು, ಶ್ರೀ ಮೈಕಲ್ ಬೆಂಜಮಿನ್ ಮತ್ತು ಶ್ರೀಮತಿ ಶಬೀನ್ ತಾಜ್, ದ್ವಿತೀಯ ದರ್ಜೆ ಸಹಾಯಕರುಗಳು, ಶ್ರೀ ಅಬ್ದುಲ್ ಸುಭಾನ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಶ್ರೀ ನರಸಿಂಹಯ್ಯ, ನಿವೃತ್ತ ಗ್ರಾಮ ಲೆಕ್ಕಿಗ ರವರುಗಳ ವಿರುದ್ಧ ಹೊರಿಸಲಾದ ಆರೋಪಗಳಿಂದ ಇವರುಗಳನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸುತ್ತದೆ. ಆದಾಗ್ಯೂ ಈ ಎಲ್ಲಾ ಅಧಿಕಾರಿ/ನೌಕರರುಗಳಿಗೆ ತೀವ್ರವಾಗಿ ಎಚ್ಚರಿಕೆಯನ್ನು ಈ ಮೂಲಕ ನೀಡಲಾಗಿದೆ.

ಈ ವಿಚಾರಣೆಯು ನಡೆಯದಿದ್ದಲ್ಲಿ ಸದರಿ ಅಧಿಕಾರಿ/ನೌಕರರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 64

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-2006 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಬೆಂಗಳೂರು ಗ್ರಾಮಾಂತರ, ಗುಲ್ಬರ್ಗಾ ಮತ್ತು ಕೊಡಗು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ 17013 : 10 : 2005 ಎಸ್‌ಜಿಎಸ್‌ವೈ- I (10) ದಿನಾಂಕ: 11-04-2005.

(2) ರಾಜ್ಯ ಸರ್ಕಾರದ ಆದೇಶ ಪತ್ರ ಸಂಖ್ಯೆ : ಗ್ರಾಅಪ 12 ಸ್ವಜಯೋ 05 ದಿನಾಂಕ 23-05-2005 ಮತ್ತು 21-06-2005 (ತಿದ್ದುಪಡಿ).

(3) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17013 : 10 : 2005 - ಎಸ್‌ಜಿಎಸ್‌ವೈ I (53) ದಿನಾಂಕ 08-11-2005 (62), ದಿನಾಂಕ: 05-12-2005

ಪ್ರಸ್ತಾವನೆ:

ಕೇಂದ್ರ ಮತ್ತು ರಾಜ್ಯ ಸರ್ಕಾರ ಉಲ್ಲೇಖಿತ (1) ಮತ್ತು (2) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಒಂದನೇ ಕಂತಿನ ಹಣ ರೂ.19,19,09,000 ಹಾಗೂ 6,39,70,000 ಕ್ರಮವಾಗಿ ಬಿಡುಗಡೆ ಮಾಡಿವೆ. ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಉಲ್ಲೇಖ (3) ರಂತೆ ಬೆಂಗಳೂರು ಗ್ರಾಮಾಂತರ, ಗುಲ್ಬರ್ಗಾ ಮತ್ತು ಕೊಡಗು ಜಿಲ್ಲೆಗಳಿಗೆ ರೂ.2,05,57,000 ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.68,52,000 (ರೂ.ಅರವತ್ತೆಂಟು ಲಕ್ಷದ ಐವತ್ತೆರಡು ಸಾವಿರ ಮಾತ್ರ) ಗಳನ್ನು ಬೆಂಗಳೂರು ಗ್ರಾಮಾಂತರ, ಗುಲ್ಬರ್ಗಾ ಮತ್ತು ಕೊಡಗು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 12 ಸ್ವಜಯೋ 2005, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

ರಾಜ್ಯ ಸರ್ಕಾರವು ಬೆಂಗಳೂರು ಗ್ರಾಮಾಂತರ , ಗುಲ್ಬರ್ಗಾ ಮತ್ತು ಕೊಡಗು ಜಿಲ್ಲೆಗಳಿಗೆ ಎರಡನೇ ಕಂತಿನ ಹಣ ರೂ. 68,52,000 (ರೂ.ಅರವತ್ತೆಂಟು ಲಕ್ಷದ ಐವತ್ತೆರಡು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಎರಡನೇ ಕಂತು | ಗ್ರಾ.ಅ.ಪಂ.ರಾ ಇಲಾಖೆಯಿಂದ ಬಿಡುಗಡೆ ಮಾಡಬೇಕಾದ ಹಣ (ಎರಡನೇ ಕಂತು) |
|---|---|---|---|---|---|
| 1 | ಬೆಂಗಳೂರು ಗ್ರಾಮಾಂತರ | 402 | 0300ZZ8001 | 68,70,000 | 22,90,000 |
| 2 | ಗುಲ್ಬರ್ಗ | 417 | 3200ZZ0003 | 1,19,97,000 | 39,99,000 |
| 2 | ಕೊಡಗು | 411 | 1200ZZ0001 | 16,90,000 | 05,63,000 |
| | ಒಟ್ಟು | | | 2,05,57,000 | 68,52,000 |

**ಷರತ್ತುಗಳು ಕೆಳಕಂಡಂತಿವೆ:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮ ಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198- ಗ್ರಾಮ ಪಂಚಾಯತ್‌ಗಳಿಗೆ ಸಹಾಯ-1-ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2005-2006 (2501-01-198-1-01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 14-07-2005 ರನ್ವಯ ಎಸ್‌ಜಿಎಸ್‌ವೈ ಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿ ಗ್ರಾಮ ಪಂಚಾಯತಿಗಳ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಅನುದಾನ ಜಮೆ ಮಾಡುವ ಬಗ್ಗೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 542 ಪಿಬಿಎಸ್ 2005 ದಿನಾಂಕ 20-12-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 84

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಮೊದಲನೇ ಕಂತಿನ ಅನುದಾನಕ್ಕೆ ಪೂರಕವಾಗಿ ಜಿಲ್ಲಾ ಪಂಚಾಯತ್‌ಗಳಿಗೆ ಶೇಕಡಾ 20ರ ಭಾಗಾಂಶದ ರಾಜ್ಯದ ಪಾಲಿನ ಬಾಕಿ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ-II/Sl.No.80 ದಿನಾಂಕ. 5.10.2005.

ಪ್ರಸ್ತಾವನೆ:-

ಕೇಂದ್ರ ಸರ್ಕಾರವು ಈಗಾಗಲೇ ಶೇಕಡಾ 44ರಷ್ಟು ಭಾಗಶ: ಅನುದಾನವನ್ನು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತಿಗಳಿಗೆ ಮೊದಲನೇ ಕಂತಾಗಿ ಬಿಡುಗಡೆ ಮಾಡಿರುವುದು ಸರಿಯಷ್ಟೆ. ಅದಕ್ಕೆ ಪೂರಕವಾಗಿ, ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಪ್ರತ್ಯೇಕವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗಿದೆ. ಮುಂದುವರಿದು, ಈಗ ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಬಾಕಿ ಇರುವ ಶೇಕಡಾ 16ರಷ್ಟಿನ ಮೊದಲನೇ ಕಂತಿನ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ, ರಾಜ್ಯ ಸರ್ಕಾರವು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಾಕಿ ಇರುವ ಮೊದಲನೇ ಕಂತಿನ ಶೇಕಡಾ 20ರ ಭಾಗಾಂಶದ ರೂ.201.722 ಲಕ್ಷಗಳನ್ನು (ರೂ.ಎರಡು ಕೋಟಿ ಒಂದು ಲಕ್ಷದ ಎಪ್ಪತ್ತೆರಡು ಸಾವಿರದ ಇನ್ನೂರು ಮಾತ್ರ) ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ.ಗ್ರಾಅಪ.64.ಎಸ್‌ಜಿಆರ್‌ವೈ.2005 ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಾಕಿ ಇರುವ ರಾಜ್ಯದ ಪಾಲಿನ ಅನುದಾನವಾದ ರೂ.201.722 ಲಕ್ಷಗಳನ್ನು (ರೂ.ಎರಡು ಕೋಟಿ ಒಂದು ಲಕ್ಷ ಎಪ್ಪತ್ತೆರಡು ಸಾವಿರದ ಇನ್ನೂರು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ರಾಜ್ಯದ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳ ಮೂಲಕ ಹಾಗೂ ಮಾರ್ಗ ಸೂಚಿಗಳಲ್ಲಿ ತಿಳಿಸಿರುವ ರೀತ್ಯಾ, ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಜಿಲ್ಲಾ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-1-ಜಿಲ್ಲಾ ಪಂಚಾಯತಿಗಳು-04- ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-1-04) 2005-06 (ಯೋಜನೆ) "

ಖಜಾನೆಯಿಂದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ. ಎಫ್‌ಡಿ. 7. ಜೆಡ್‌ಪಿಎ. 2003 ಬೆಂಗಳೂರು, ದಿನಾಂಕ.14.7.2005ರನ್ವಯ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ. ಗ್ರಾಅಪ.540.ಪಿಬಿಎಸ್.05 ದಿನಾಂಕ.20.12.2005ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

***ANNEXURE***

***G.O.NO.RDP:64:SGRY:2005 DATED:21.12.2005***

**Statement showing the details of the Release of balance of Ist instalment of State share of assistance to all Zilla Panchayats under SGRY during 2005-06.**

(Rs.in lakhs)

| Sl. No. | District | Object head prescribed to the districts | Release of balance of Ist instalment of Central share of assistance | State share to be released | 20% of the State share being released to ZPs (out of 5) | Balance to be released later on |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Bagalkot | 461 | 104.22 | 34.74 | 6.950 | |
| 2 | Bangalore(R) | 402 | 142.90 | 47.63 | 9.530 | |
| 3 | Bangalore(U) | 401 | 110.95 | 36.98 | 7.400 | |
| 4 | Belgaum | 413 | 150.83 | 50.28 | 4.202 | 5.858 |
| 5 | Bellary | 418 | 118.62 | 39.54 | 7.910 | |
| 6 | Bidar | 419 | 138.47 | 46.16 | 9.230 | |
| 7 | Bijapur | 414 | 122.11 | 40.70 | 8.140 | |
| 8 | Chamarajanagar | 456 | 99.06 | 33.02 | 6.594 | |
| 9 | Chickmagalur | 408 | 88.27 | 29.42 | 5.880 | |
| 10 | Chitradurga | 403 | 162.36 | 54.12 | 8.180 | 2.635 |

| 1 | 2 | 3 | 4 | 5 | 6 | 7 |
|---|---|---|---|---|---|---|
| 11 | D.Kannada | 409 | 73.34 | 24.45 | 4.890 | |
| 12 | Davanagere | 451 | 153.34 | 51.11 | 10.220 | |
| 13 | Dharwad | 415 | 74.04 | 24.68 | 4.940 | |
| 14 | Gadag | 462 | 79.29 | 26.43 | 5.290 | |
| 15 | Gulbarga | 417 | 279.31 | 93.10 | 14.945 | 3.675 |
| 16 | Hassan | 410 | 139.15 | 46.38 | 9.280 | |
| 17 | Haveri | 463 | 98.25 | 32.75 | 6.550 | |
| 18 | Kodagu | 411 | 83.87 | 27.96 | 2.892 | 2.698 |
| 19 | Kolar | 404 | 251.45 | 83.82 | 13.490 | 3.270 |
| 20 | Koppal | 466 | 92.39 | 30.80 | 5.529 | 0.631 |
| 21 | Mandya | 412 | 88.51 | 29.50 | 5.900 | |
| 22 | Mysore | 407 | 121.75 | 40.58 | 5.814 | 2.306 |
| 23 | Raichur | 420 | 121.03 | 40.34 | 8.070 | |
| 24 | Shimoga | 405 | 83.41 | 27.80 | 5.560 | |
| 25 | Tumkur | 406 | 215.50 | 71.83 | 14.370 | |
| 26 | U.Kannada | 416 | 108.97 | 36.32 | 7.260 | |
| 27 | Udupi | 457 | 60.82 | 20.27 | 2.706 | 1.344 |
| | **Total:** | | **3362.21** | **1120.71** | **201.722** | **22.417** |

Director
Self Employment Programmes &
E/O..Dy.Secretary to Government
Rural Development & Panchayat Raj Department

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಗ್ರಾಮ ಪಂಚಾಯತ್‌ಗಳಿಗೆ ಶೇಕಡಾ 50ರ ಭಾಗಾಂಶದ ಬಾಕಿ ಇರುವ ರಾಜ್ಯದ ಪಾಲಿನ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ ಎಸ್‌ಜಿಆರ್‌ವೈ-II/ Sl. No.80 ದಿನಾಂಕ. 5.10.2005.

**ಪ್ರಸ್ತಾವನೆ:-**

ಕೇಂದ್ರ ಸರ್ಕಾರವು ಈಗಾಗಲೇ ಶೇಕಡಾ 44ರಷ್ಟು ಭಾಗಶ: ಅನುದಾನವನ್ನು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತ್‌ಗಳಿಗೆ ಮೊದಲನೇ ಕಂತಾಗಿ ಬಿಡುಗಡೆ ಮಾಡಿರುವುದು ಸರಿಯಷ್ಟೆ. ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಪ್ರತ್ಯೇಕವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗಿದೆ. ಮುಂದುವರಿದು, ಈಗ ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿಬಾಕಿ ಇರುವ ಶೇಕಡಾ 16ರಷ್ಟಿನ ಮೊದಲನೇ ಕಂತಿನ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ನೇರವಾಗಿ ಬಿಡುಗಡೆ ಮಾಡಿ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ ರಾಜ್ಯ ಸರ್ಕಾರವು ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಬಾಕಿ ಇರುವ ಮೊದಲನೇ ಕಂತಿನ ಶೇಕಡಾ 50ರ ಭಾಗಾಂಶದ ರೂ.560.38 ಲಕ್ಷಗಳನ್ನು (ರೂ.ಐದು ಕೋಟಿ ಅರವತ್ತು ಲಕ್ಷದ ಮೂವತ್ತೆಂಟು ಸಾವಿರ ಮಾತ್ರ) ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ.ಗ್ರಾಅಪ.64.ಎಸ್‌ಜಿಆರ್‌ವೈ.2005 ಬೆಂಗಳೂರು, ದಿನಾಂಕ.21ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಗ್ರಾಮ ಪಂಚಾಯತ್‌ಗಳ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 27 ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಆಯವ್ಯಯದಲ್ಲಿ ಗ್ರಾಮ ಪಂಚಾಯತ್‌ಗಳಿಗೆ ಒದಗಿಸಲಾದ ಆನುದಾನದಿಂದ ಬಾಕಿ ಇರುವ ಮೊದಲನೇ ಕಂತಿನ ಅನುದಾನವಾದ ರೂ.560.38 ಲಕ್ಷಗಳನ್ನು (ರೂ.ಐದು ಕೋಟಿ ಅರವತ್ತು ಲಕ್ಷದ ಮೂವತ್ತೆಂಟು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ ಗ್ರಾಮ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿದೆ.

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳ್ಲಲಿ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಗ್ರಾಮ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತಿಗಳಿಗೆ ಸಹಾಯ-1-ಗ್ರಾಮ ಪಂಚಾಯತಿಗಳು-04- ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-198-1-04) 2005-06 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ. ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ. 14.7.05ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು

ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಗ್ರಾಮ ಪಂಚಾಯತಿಗಳ ಅನುಷ್ಠಾನಾಧಿಕಾರಿಗಳಿಗೆ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ ಆದೇಶಿಸಿರುವಂತೆ, ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ.540.ಪಿಬಿಎಸ್.05 ದಿನಾಂಕ.20.12.2005ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

***ANNEXURE***

***G.O.NO.RDP:64:SGRY:2005 DATED:21.12.2005***

**Statement showing the details of the Release of balance of Ist instalment of State share of assistance to all Grama Panchayats under SGRY during 2005-06.**

(Rs.in lakhs)

| Sl. No. | District | Object head prescribed to the districts | Release of balance of Ist instalment of Central share of assistance | State share to be released | 50% of the State share being released to GPs (out of 5) |
|---|---|---|---|---|---|
| 1 | 2 | 3 | 4 | 5 | 6 |
| 1 | Bagalkot | 461 | 104.22 | 34.74 | 17.37 |
| 2 | Bangalore(R) | 402 | 142.90 | 47.63 | 23.82 |
| 3 | Bangalore(U) | 401 | 110.95 | 36.98 | 18.49 |
| 4 | Belgaum | 413 | 150.83 | 50.28 | 25.14 |
| 5 | Bellary | 418 | 118.62 | 39.54 | 19.77 |
| 6 | Bidar | 419 | 138.47 | 46.16 | 23.08 |
| 7 | Bijapur | 414 | 122.11 | 40.70 | 20.35 |
| 8 | Chamarajanagar | 456 | 99.06 | 33.02 | 16.51 |
| 9 | Chickmagalur | 408 | 88.27 | 29.42 | 14.71 |
| 10 | Chitradurga | 403 | 162.36 | 54.12 | 27.06 |
| 11 | D.Kannada | 409 | 73.34 | 24.45 | 12.22 |
| 12 | Davanagere | 451 | 153.34 | 51.11 | 25.56 |
| 13 | Dharwad | 415 | 74.04 | 24.68 | 12.34 |
| 14 | Gadag | 462 | 79.29 | 26.43 | 13.22 |
| 15 | Gulbarga | 417 | 279.31 | 93.10 | 46.55 |
| 16 | Hassan | 410 | 139.15 | 46.38 | 23.19 |
| 17 | Haveri | 463 | 98.25 | 32.75 | 16.38 |
| 18 | Kodagu | 411 | 83.87 | 27.96 | 13.98 |
| 19 | Kolar | 404 | 251.45 | 83.82 | 41.91 |
| 20 | Koppal | 466 | 92.39 | 30.80 | 15.40 |
| 21 | Mandya | 412 | 88.51 | 29.50 | 14.75 |
| 22 | Mysore | 407 | 121.75 | 40.58 | 20.29 |
| 23 | Raichur | 420 | 121.03 | 40.34 | 20.17 |
| 24 | Shimoga | 405 | 83.41 | 27.80 | 13.90 |
| 25 | Tumkur | 406 | 215.50 | 71.83 | 35.92 |
| 26 | U.Kannada | 416 | 108.97 | 36.32 | 18.16 |
| 27 | Udupi | 457 | 60.82 | 20.27 | 10.14 |
| | **Total:** | | **3362.21** | **1120.71** | **560.38** |

Director
Self Employment Programmes &
E/O..Dy.Secretary to Government
Rural Development & Panchayat Raj Department

**ವಿಷಯ:** 2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಬಾಕಿ ಇರುವ ಮೊದಲನೇ ಕಂತಿನ ಅನುದಾನಕ್ಕೆ ಪೂರಕವಾಗಿ ತಾಲ್ಲೂಕು ಪಂಚಾಯತ್‌ಗಳಿಗೆ ಶೇಕಡಾ 30ರ ಭಾಗಾಂಶದ ರಾಜ್ಯದ ಪಾಲಿನ ಬಾಕಿ ಇರುವ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ಎಸ್‌ಜಿಆರ್‌ವೈ-II/Sl.No.80 ದಿನಾಂಕ. 5.10.2005.

**ಪ್ರಸ್ತಾವನೆ:-**

ಕೇಂದ್ರ ಸರ್ಕಾರವು ಈಗಾಗಲೇ, ಶೇಕಡಾ 44ರಷ್ಟು ಭಾಗಶ: ಅನುದಾನವನ್ನು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತ್‌ಗಳಿಗೆ ಮೊದಲನೇ ಕಂತಾಗಿ ಬಿಡುಗಡೆ ಮಾಡಿರುವುದು ಸರಿಯಷ್ಟೆ. ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಪ್ರತ್ಯೇಕವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗಿದೆ. ಮುಂದುವರಿದು, ಈಗ ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಬಾಕಿ ಇರುವ ಶೇಕಡಾ 16ರಷ್ಟಿನ ಮೊದಲನೇ ಕಂತಿನ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ನೇರವಾಗಿ ಬಿಡುಗಡೆ ಮಾಡಿ ಪೂರಕವಾಗಿ ರಾಜ್ಯ ಸರ್ಕಾರವು ಕೂಡ ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಅದರಂತೆ, ರಾಜ್ಯ ಸರ್ಕಾರವು ರಾಜ್ಯದ ಎಲ್ಲಾ ತಾಲ್ಲೂಕು ಪಂಚಾಯತ್‌ಗಳಿಗೆ ಬಾಕಿ ಇರುವ ಮೊದಲನೇ ಕಂತಿನ ಶೇಕಡಾ 30ರ ಭಾಗಾಂಶದ ರೂ.336.24 ಲಕ್ಷಗಳನ್ನು (ರೂ.ಮೂರು ಕೋಟಿ ಮೂವತ್ತಾರು ಲಕ್ಷದ ಇಪ್ಪತ್ತ ನಾಲ್ಕು ಸಾವಿರ ಮಾತ್ರ) ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ.ಗ್ರಾಅಪ.64.ಎಸ್‌ಜಿಆರ್‌ವೈ.2005 ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2005-06ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 27 ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಆಯವ್ಯಯದಲ್ಲಿ ತಾಲ್ಲೂಕು ಪಂಚಾಯತ್‌ಗಳಿಗೆ ಒದಗಿಸಲಾದ ಅನುದಾನ ದಿಂದ, ಬಾಕಿ ಇರುವ ಮೊದಲನೇ ಕಂತಿನ ಅನುದಾನವಾದ ರೂ.336.24 ಲಕ್ಷಗಳನ್ನು (ರೂ.ಮೂರು ಕೋಟಿ ಮೂವತ್ತಾರು ಲಕ್ಷದ ಇಪ್ಪತ್ತನಾಲ್ಕು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ ತಾಲ್ಲೂಕು ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ

2005-06ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ, ಸುತ್ತೋಲೆಗಳ ಮೂಲಕ ಹಾಗೂ ಮಾರ್ಗ ಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ತಾಲ್ಲೂಕು ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-197 ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-1-ತಾಲ್ಲೂಕು ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-197-1-04) 2005-06 (ಯೋಜನೆ)"

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ. ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ. 14.7.05 ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಲು, ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ. ಗ್ರಾಅಪ.540.ಪಿಬಿಎಸ್.05 ದಿನಾಂಕ.20.12.2005ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

***ANNEXURE***

***G.O.NO.RDP:64:SGRY:2005 DATED:21.12.2005***

***Statement showing the details of the Release of balance of Ist instalment of State share of assistance to all Taluk Panchayats under SGRY during 2005-06.***

(Rs.in lakhs)

| Sl. No. | District | Object head prescribed to the districts | Release of balance of Ist instalment of Central share of assistance | State share to be released | 30% of the State share being released to TPs (out of 5) |
|---|---|---|---|---|---|
| 1 | 2 | 3 | 4 | 5 | 6 |
| 1 | Bagalkot | 461 | 104.22 | 34.74 | 10.42 |
| 2 | Bangalore(R) | 402 | 142.90 | 47.63 | 14.29 |

| 1 | 2 | 3 | 4 | 5 | 6 |
|---|---|---|---|---|---|
| 3 | Bangalore(U) | 401 | 110.95 | 36.98 | 11.10 |
| 4 | Belgaum | 413 | 150.83 | 50.28 | 15.08 |
| 5 | Bellary | 418 | 118.62 | 39.54 | 11.86 |
| 6 | Bidar | 419 | 138.47 | 46.16 | 13.85 |
| 7 | Bijapur | 414 | 122.11 | 40.70 | 12.21 |
| 8 | Chamarajanagar | 456 | 99.06 | 33.02 | 9.91 |
| 9 | Chickmagalur | 408 | 88.27 | 29.42 | 8.83 |
| 10 | Chitradurga | 403 | 162.36 | 54.12 | 16.24 |
| 11 | D.Kannada | 409 | 73.34 | 24.45 | 7.33 |
| 12 | Davanagere | 451 | 153.34 | 51.11 | 15.33 |
| 13 | Dharwad | 415 | 74.04 | 24.68 | 7.40 |
| 14 | Gadag | 462 | 79.29 | 26.43 | 7.93 |
| 15 | Gulbarga | 417 | 279.31 | 93.10 | 27.93 |
| 16 | Hassan | 410 | 139.15 | 46.38 | 13.92 |
| 17 | Haveri | 463 | 98.25 | 32.75 | 9.83 |
| 18 | Kodagu | 411 | 83.87 | 27.96 | 8.39 |
| 19 | Kolar | 404 | 251.45 | 83.82 | 25.15 |
| 20 | Koppal | 466 | 92.39 | 30.80 | 9.24 |
| 21 | Mandya | 412 | 88.51 | 29.50 | 8.85 |
| 22 | Mysore | 407 | 121.75 | 40.58 | 12.18 |
| 23 | Raichur | 420 | 121.03 | 40.34 | 12.10 |
| 24 | Shimoga | 405 | 83.41 | 27.80 | 8.34 |
| 25 | Tumkur | 406 | 215.50 | 71.83 | 21.55 |
| 26 | U.Kannada | 416 | 108.97 | 36.32 | 10.90 |
| 27 | Udupi | 457 | 60.82 | 20.27 | 6.08 |
| | **Total:** | | **3362.21** | **1120.71** | **336.24** |

Director
Self Employment Programmes &
E/O..Dy.Secretary to Government
Rural Development & Panchayat Raj Department

P.R. 85

**ವಿಷಯ:** ಡಿಆರ್‌ಡಿಎ ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ:** (1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ ಆರ್ 20015-32-2004 ಡಿಆರ್‌ಡಿಎ ದಿನಾಂಕ 03-01-2005.
(2) ರಾಯಚೂರು ಜಿಲ್ಲಾ ಪಂಚಾಯತ್‌ರವರ ಪತ್ರದ ದಿನಾಂಕ 18-04-2005, 17-08-2005 ಮತ್ತು 30-09-2005

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಬದಲಿ ವಾಹನ ಖರೀದಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿರುತ್ತದೆ. ಇದರನ್ವಯ ರಾಯಚೂರು ಜಿಲ್ಲಾಪಂಚಾಯತ್ ದಿನಾಂಕ: 18-04-2005ರಂದು ಬದಲಿ ವಾಹನ ಖರೀದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿತು. ದಿನಾಂಕ: 17-03-2005 ರಂದು ರಾಯಚೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸಿಏಜಿ 7351 ವಾಹನವನ್ನು ಅನುಪಯುಕ್ತವೆಂದು ಘೋಷಿಸಿ ಇದರ ಅಂದಾಜು ಬೆಲೆ ರೂ. 30,000 ಅಥವಾ ಅದಕ್ಕಿಂತ ಹೆಚ್ಚು ಎಂದು ಅಂದಾಜಿಸಿದ್ದರು. ಸದರಿ ಜಿಲ್ಲಾ ಪಂಚಾಯತ್‌ರವರು ಹೊಸ ವಾಹನವನ್ನು ಖರೀದಿಸಲು 1) ಮೆ: ವಿ.ಕೆ.ಜಿ ಮೋಟಾರ್ಸ್ ಗುಲ್ಬರ್ಗ- ಟಾಟಾ ಸುಮೋ ವಿಕ್ಟರ್ ಬೆಲೆ ರೂ. 5,99,813/-ಮತ್ತು 2) ಶೋಧ ಟೊಯೋಟ, ಹುಬ್ಬಳ್ಳಿ ರವರುಗಳಿಂದ - ಟೊಯೊಟ್ ಇನ್ನೋವ ಜಿ-2 ರ ಬೆಲೆ ರೂ. 9,23,259/- ರ ಬೆಲೆಯ proforma invoice ಗಳನ್ನು ಪಡೆದು ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಅನುಪಯುಕ್ತ ವಾಹನ ಹರಾಜು ಮಾಡಿ ಬಂದ ಹಣ ಹಾಗೂ ಡಿ.ಆರ್.ಡಿ.ಎ ಆಡಳಿತ ಯೋಜನೆಯಡಿಯಲ್ಲಿ ಲಭ್ಯವಿರುವ ಹಣದಿಂದ ಟಾಟಾ ಸುಮೋ ವಿಕ್ಟರ್ (Euru II) ಅಥವಾ ಟಯೋಟೋ ಇನ್ನೋವಾ ಜಿ-2 ಖರೀದಿಸಲು ಅನುಮತಿ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಗಣಿಸಿ ಕಡಿಮೆ ಮೌಲ್ಯದ ವಾಹನವನ್ನು ಖರೀದಿಸಲು ಅನುಮತಿ ನೀಡಿದೆ. ಆದರೆ ಹಳೆ ವಾಹನ ಹರಾಜು ಮಾಡಿ ಬಂದ ಹಣ ಹಾಗೂ ಡಿಆರ್‌ಡಿಎ ಆಡಳಿತ ಯೋಜನೆಯಲ್ಲಿ ಉಳಿಯುವ ಹಣ ರೂ.4,25,000/- ಗರಿಷ್ಠ ಮಿತಿಗೊಳಪಟ್ಟು ಹೊಸ ವಾಹನ ಖರೀದಿಸಲು ಅನುಮತಿ ನೀಡಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 9 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ : 22ನೇ ಡಿಸೆಂಬರ್ 2005**

ರಾಜ್ಯ ಸರ್ಕಾರವು ರಾಯಚೂರು ಜಿಲ್ಲಾ ಪಂಚಾಯತಿಯ ವಾಹನ ಸಂಖ್ಯೆ ಸಿಏಜಿ 7351 ರ ಬದಲಿಗೆ ಒಂದು ಹೊಸ ವಾಹನ ರೂ.4,25,000-00 (ರೂ. ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ಮಾತ್ರ) ಗರಿಷ್ಠ ಮಿತಿಗೊಳಪಟ್ಟು ಖರೀದಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

- ಹೊಸ ವಾಹನವನ್ನು ಕೇಂದ್ರ ಸರ್ಕಾರದ ಪತ್ರ ಆರ್ 20015-32-2004 ಡಿಆರ್‌ಡಿಎ ದಿನಾಂಕ 03-01-2005 ರನ್ವಯ ಖರೀದಿಸತಕ್ಕದ್ದು.
- ಡಿಆರ್‌ಡಿಎ ಆಡಳಿತ ಯೋಜನೆಯಡಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.
- ಹಳೆ ವಾಹನ ಹರಾಜು ಮಾಡಿ ಬಂದ ಹಣವನ್ನು ಹೊಸ ವಾಹನ ಖರೀದಿಗೆ ಬಳಸತಕ್ಕದ್ದು.
- ವಾಹನ ಖರೀದಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಲಭ್ಯವಿರುವ ಅನುದಾನ ರೂ.4,25,000-00 (ರೂ. ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ಮಾತ್ರ) ಗಳ ಗರಿಷ್ಠ ಮಿತಿಗೊಳಪಟ್ಟು ಖರೀದಿಸತಕ್ಕದ್ದು. ಯಾವುದೇ ಕಾರಣಕ್ಕೂ ಆರ್ಥಿಕ ಮಿತಿ ಮೀರತಕ್ಕದ್ದಲ್ಲ.
- ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಠ ಶೇ.30 ರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸತಕ್ಕದ್ದು ಹಾಗೂ ಖರೀದಿಸಿದ ನಂತರ ಸರ್ಕಾರಕ್ಕೆ ತಿಳಿಸತಕ್ಕದ್ದು.
- ವಾಹನ ಖರೀದಿಯು ಸರ್ಕಾರದ ಖರೀದಿ ನಿಯಮಗಳನ್ವಯ ಇರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ ಆಇ 2068 ವೆಚ್ಚ 6 ದಿನಾಂಕ 21-12-2005ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 82

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ವಿಷಯ:** "ನಮ್ಮ ಭೂಮಿ-ನಮ್ಮ ತೋಟ" ಯೋಜನೆಯ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 5 ಸ್ವಉಕಾ 2005 ಬೆಂಗಳೂರು , ದಿನಾಂಕ 28-09-2005.
2. ಈ ಇಲಾಖೆಯ ಪತ್ರದ ಸಮಸಂಖ್ಯೆ ದಿನಾಂಕ 6-10-2005
3. ಈ ಇಲಾಖೆಯ ಪತ್ರದ ಸಮಸಂಖ್ಯೆ ದಿನಾಂಕ 18-10-2005

**ಪ್ರಸ್ತಾವನೆ:**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸಮಸ್ತ ಭೂರಹಿತ ಕೃಷಿ ಕಾರ್ಮಿಕರ ಸಾಮಾಜಿಕ ಆರ್ಥಿಕ ವಿಕಾಸಕ್ಕೆ ಹಾಗೂ ಅವರ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ "ನಮ್ಮ ಭೂಮಿ - ನಮ್ಮ ತೋಟ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಕ್ಕೆ ಜಾರಿಗೊಳಿಸಿದೆ. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಚಿವ ಸಂಪುಟವು ದಿನಾಂಕ 15-9-2005 ರಂದು ಅನುಮೋದನೆಯನ್ನು ನೀಡಿದೆ. ಪ್ರಸ್ತುತ ವರ್ಷದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆರ್ಥಿಕ ಮತ್ತು ಭೌತಿಕ ಗುರಿಗಳನ್ನು ನಿಗದಿಪಡಿಸಿ ಹಂಚಿಕೆ ಮಾಡಲಾಗಿದೆ. ಭೌತಿಕ ಗುರಿಯನ್ನು ಹಂಚಿಕೆಯಂತೆ ಪೂರ್ಣವಾಗಿ ಪ್ರಚಲಿತ ವರ್ಷದಲ್ಲಿ ಸಾಧಿಸಲು ಜಿಲ್ಲಾ ಪಂಚಾಯಿತಿಗಳಿಗೆ ಆದೇಶಿಸಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಪ್ರಾಥಮಿಕ ಹಂತದಲ್ಲಿ ನಿಗದಿಪಡಿಸಿದ ಹಂಚಿಕೆಯ ಅನುದಾನದಲ್ಲಿ ಶೇಕಡ 50 ರಷ್ಟು ಅನುದಾನವನ್ನು ಮೊದಲನೆ ಕಂತಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವ ಉಕ 2005, ಬೆಂಗಳೂರು, ದಿನಾಂಕ 1ನೇ ಡಿಸೆಂಬರ್ 2005**

1. ಪ್ರಸ್ತಾವನೆಯಲ್ಲಿ ವಿವರಿಸಿದಂತೆ "ನಮ್ಮ ಭೂಮಿ - ನಮ್ಮ ತೋಟ" ಎಂಬ ಯೋಜನೆಯನ್ನು ರಾಜ್ಯದ ಜಿಲ್ಲಾ ಪಂಚಾಯತ್‌ಗಳ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ, ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಒಟ್ಟು ರೂ. 10,0000000-00 ಗಳನ್ನು(ರೂ ಹತ್ತು ಕೋಟಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

1. ಅತೀ ಹೆಚ್ಚು ಭೂರಹಿತ ಕೃಷಿ ಕಾರ್ಮಿಕರ ಕುಟುಂಬಗಳು ಇರುವಂತಹ ಗ್ರಾಮ ಪಂಚಾಯತ್‌ಗಳನ್ನು ಆದ್ಯತೆಯ ಮೇಲೆ ಆಯ್ಕೆ ಮಾಡುವುದು.
2. ನಿಗದಿಪಡಿಸಿದ ಭೌತಿಕ ಮತ್ತು ಆರ್ಥಿಕ ಗುರಿಯಂತೆ ಯಾವುದೇ ಕಾರಣಕ್ಕೂ ಮೀರದಂತೆ, ಸಾಧನೆ ಮಾಡುವುದು.
3. ಯೋಜನೆಯ ಅನುಷ್ಠಾನಕ್ಕೆ ಆಯ್ಕೆಯಾದ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನು ಖರೀದಿಗೆ ಸುಲಭವಾಗಿ ದೊರೆಯುವಂತಿರಬೇಕು.
4. ಫಲವತ್ತಾದ ಜಮೀನಿನ ಲಭ್ಯತಾನುಸಾರ ಖರೀದಿ ಮೊತ್ತ ಪ್ರತಿ ಫಲಾನುಭವಿಗೆ ರೂ 6000-00 ಗಳಿಗೆ ಮೀರದಂತೆ, ಕ್ರಮ ಜರುಗಿಸುವುದು.
5. ಸದರಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮ ಪಂಚಾಯತ್ ಯೋಜನೆಗೆ ಹೊರಡಿಸಲಾದ ಸರ್ಕಾರಿ ಸುತ್ತೋಲೆ ಮತ್ತು ಮಾರ್ಗ ಸೂಚಿಗಳ ಪ್ರಕಾರ ಅನುಷ್ಠಾನಕ್ಕೆ ಕ್ರಮಕೈಗೊಳ್ಳುವುದು.
6. ಜನವರಿ 2006 ಅಂತ್ಯದೊಳಗೆ, ಪ್ರಾಥಮಿಕ ಎಲ್ಲಾ ಪ್ರಕ್ರಿಯಗಳನ್ನು ಪೂರ್ಣಗೊಳಿಸಿ, (ಫಲಾನುಭವಿಗಳ ಆಯ್ಕೆ ಮತ್ತು ಭೂಮಿ ಖರೀದಿ ಸೇರಿದಂತೆ) ಫಲಾನುಭವಿಗಳಿಗೆ ಭೂಮಿಯನ್ನು ನೀಡುವ ಪ್ರಕ್ರಿಯೆಗೆ ಚಾಲನೆ ನೀಡುವುದು.
7. ಪ್ರಸ್ತುತ ವರ್ಷದಲ್ಲಿ ಬಿಡುಗಡೆಯಾದ ಅನುದಾನವನ್ನು ಮಾರ್ಚ್ 2006 ರೊಳಗೆ ಸಂಪೂರ್ಣವಾಗಿ ಯೋಜನೆಗೆ ಬಳಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.
8. ಮಾರ್ಗಸೂಚಿಯಲ್ಲಿ ತಿಳಿಸಿದ ರೀತ್ಯ ಮೂರು ಹಂತಗಳ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಿವಿಧ ಸಮಿತಿಗಳನ್ನು ಸಕಾಲದಲ್ಲಿ ರಚಿಸಿ, ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನ ನೀಡುವಂತೆ ಹಾಗೂ ಅನುಷ್ಠಾನಾಧಿಕಾರಿಗಳಿಗೆ ನೆರವಾಗುವಂತೆ ಮತ್ತು ತಾಂತ್ರಿಕ ಸಲಹೆಗಳನ್ನು ನೀಡುವಂತೆ, ಕಾರ್ಯನಿರ್ವಹಣೆಗೆ ಬರಲು ಕ್ರಮ ಜರುಗಿಸುವುದು.

9. ನಿಗದಿಪಡಿಸಿದ ಭೌತಿಕ ಗುರಿಗೆ ಅನುಗುಣವಾಗಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮಗಳು ಮತ್ತು ಫಲಾನುಭವಿಗಳ ಹೆಸರು ಮುಂತಾದ ವಿವರಗಳನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸುವುದು.
10. ಇಂತಹ ಸೌಲಭ್ಯವನ್ನು ಇತರೆ ಯೋಜನೆಗಳನ್ನು ಪಡೆದಿದ್ದಲ್ಲಿ, ಅಂತಹ ಫಲಾನುಭವಿಗಳಿಗೆ ಈ ಯೋಜನೆಯ ಪ್ರಯೋಜನವನ್ನು ನೀಡಬಾರದು. ಯಾವುದೇ ಸಂದರ್ಭದಲ್ಲಿ ಎರಡು ಅಥವಾ ಹೆಚ್ಚು ಕಾರ್ಯಕ್ರಮಗಳಲ್ಲಿ ಪ್ರಯೋಜನಗಳನ್ನು ಪಡೆಯದಂತೆ ನೋಡಿಕೊಳ್ಳುವುದು.

2. ಬಿಡುಗಡೆಯಾದ ಅನುದಾನವನ್ನು ಗ್ರಾಮ ಪಂಚಾಯತ್‌ಗಳಿಗೆ ಹದಿನೈದು ದಿನಗಳೊಳಗಾಗಿ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಬಿಡುಗಡೆ ಮಾಡುವುದು.

3. ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

2515- ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು-101-ಸಹಾಯ ಅನುದಾನ-0-23-ನಮ್ಮ ಹೊಲ ನಮ್ಮ ತೋಟ-059ಇತರೆ ಖರ್ಚು(ಯೋಜನೆ) (2515-00-101-0-23-059 )

ಬಿಡುಗಡೆಯಾದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್ ಡಿ 7 ಜಡ್ ಪಿ ಎ 2003 ದಿನಾಂಕ 14-07-2005 ರನ್ವಯ ಖಜಾನೆಯಿಂದ ಅನುದಾನ ಪಡೆದು ಯೋಜನೆಯ ರೂಪು ರೇಶಗಳ ಕಂಡಿಕೆ 6.7 ರ ಅನ್ವಯ ವೆಚ್ಚದ ನಿರ್ವಹಣೆಯನ್ನು ಮಾಡುವುದು.

4. ಯೋಜನೆಯನ್ನು ಗ್ರಾಮ ಪಂಚಾಯತ್‌ಗಳ ಮೂಲಕವೇ ಅನುಷ್ಠಾನಗೊಳಿಸಬೇಕು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/ 503/ ಪಿಬಿಎಸ್ /2005// ದಿನಾಂಕ 30-11-2005 ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

***ANNEXURE***

**Statement showing the release of first instalment of funds to Zilla Panchayats under "Namma Bhoomi Namma Thota" Scheme G.O.No. RDP:5:SEP:2005, Bangalore, dated: 01.12.2005**

(in Rs.)

| Sl. No. | District | No.of Agricultural labourers | Approximate No.of landless agricultural labourers out of Col.3 | Physical target No.of landless labourers to be covered during 2005-06 | Allocation of funds | Funds being released now as 1st instalment |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Bagalkot | 272817 | 21910 | 1402 | 8760000 | 4380000 |
| 2 | Bangalore(U) | 67102 | 5400 | 350 | 5850000 | 2925000 |
| 3 | Bangalore(R) | 182197 | 14625 | 940 | 2156000 | 1078000 |
| 4 | Belgaum | 587476 | 47170 | 3014 | 18870000 | 9435000 |
| 5 | Bellary | 361433 | 29018 | 1856 | 11609000 | 5804000 |
| 6 | Bidar | 209047 | 16784 | 1075 | 6714000 | 3357000 |
| 7 | Bijapur | 286739 | 23025 | 1472 | 9210000 | 4605000 |
| 8 | Chitradurga | 241444 | 19400 | 1250 | 6199000 | 3099000 |
| 9 | Chickmagalur | 109037 | 8760 | 561 | 3503000 | 1752000 |
| 10 | Chamarajanagar | 192978 | 15500 | 992 | 7755000 | 3877000 |
| 11 | D.Kannada | 42566 | 3425 | 218 | 1367000 | 683000 |
| 12 | Davanagere | 270703 | 21700 | 1390 | 8694000 | 4348000 |
| 13 | Dharwad | 186543 | 14980 | 954 | 5991000 | 2996000 |
| 14 | Gadag | 179595 | 14425 | 922 | 5768000 | 2884000 |
| 15 | Gulbarga | 539561 | 43319 | 2771 | 17330000 | 8665000 |
| 16 | Hassan | 126659 | 10170 | 653 | 4068000 | 2034000 |
| 17 | Haveri | 291275 | 23390 | 1498 | 9355000 | 4677000 |
| 18 | Kodagu | 11479 | 920 | 58 | 370000 | 185000 |
| 19 | Kolar | 337971 | 27140 | 1740 | 10855000 | 5428000 |
| 20 | Koppal | 234992 | 18861 | 1210 | 7548000 | 3774000 |

| 1 | 2 | 3 | 4 | 5 | 6 | 7 |
|---|---|---|---|---|---|---|
| 21 | Mandya | 206111 | 16550 | 1056 | 6620000 | 3310000 |
| 22 | Mysore | 250362 | 20100 | 1286 | 8041000 | 4020000 |
| 23 | Raichur | 328491 | 26369 | 1683 | 10551000 | 5276000 |
| 24 | Shimoga | 224124 | 18000 | 1152 | 7199000 | 3600000 |
| 25 | Tumkur | 313906 | 25225 | 1612 | 10082000 | 5041000 |
| 26 | U.Kannada | 84573 | 6784 | 435 | 2716000 | 1358000 |
| 27 | Udupi | 87761 | 7050 | 450 | 2819000 | 1409000 |
| | **Total:** | **6226942** | **500000** | **32000** | **200000000** | **100000000** |

Director
Self Employment Programmes &
E/O..Dy.Secretary to Government
Rural Development & Panchayat Raj Department

P.R. 14

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಸೀಲ್ದಾರ್, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿವೃತ್ತರು) ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ದಿನಾಂಕ: 24-4-2001ರ ಪತ್ರ ಸಂಖ್ಯೆ:ಇಎಸ್‌ಟಿ (2) ಸಿಆರ್ 30/99-2000.
2) ದಿನಾಂಕ:18-7-2002ರ ತಿಳುವಳಿಕೆ ಪತ್ರ ಸಂಖ್ಯೆ:ಆರ್‌ಡಿ 48 ಎಡಿಇ 2001.
3) ಲಿಖಿತ ಹೇಳಿಕೆ:1) ಶ್ರೀ ಮೊಹಮ್ಮದ್ ಸಿಗ್ಬತುಲ್ಲಾ, ದ್ವಿ.ದ.ಸ., ದಿ: 28-8-2002.
   2) ಶ್ರೀ ಬಿ.ಟಿ.ಗೋವಿಂದಮರಿಗೌಡ, ತಹಸೀಲ್ದಾರ್(ನಿವೃತ್ತ), ದಿ: 4-9-2002.
   3) ಶ್ರೀ ಎಂ.ನಾಗೇಶ್, ದ್ವಿ.ದ.ಸ., ದಿನಾಂಕ:31-8-2002.
   4) ಶ್ರೀ ಹೆಚ್.ಎನ್.ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್, ದಿನಾಂಕ:25-9-2002.
4) ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 48 ಎಡಿಇ 2001, ದಿನಾಂಕ:19-12-2003.

**ಪ್ರಸ್ತಾವನೆ:**

ಹೊಸಕೋಟೆ ತಾಲ್ಲೂಕಿನಲ್ಲಿ 1998ನೇ ಸಾಲಿನಲ್ಲಿ ಭಾರಿ ಮಳೆಯಿಂದ ಉಂಟಾದ ನಷ್ಟಕ್ಕೆ ಪರಿಹಾರ ಮಂಜೂರು ಮಾಡುವಲ್ಲಿ ಹಣ ದುರುಪಯೋಗಪಡಿಸಿರುತ್ತಾರೆಂಬ ಸಾರ್ವಜನಿಕರ ದೂರುಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ/ನೌಕರರು ಕರ್ತವ್ಯಲೋಪ ಎಸಗಿರುತ್ತಾರೆಂದು ಮತ್ತು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಬೇಕೆಂದು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:24-4-2001ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರಾದ:**

1) ಬಿ.ಟಿ.ಗೋವಿಂದಮರಿಗೌಡ, ಹಿಂದಿನ ತಹಸೀಲ್ದಾರ್, ಹೊಸಕೋಟೆ ತಾಲ್ಲೂಕು (ಹಾಲಿ ನಿವೃತ್ತರು).
2) ಹೆಚ್.ಎನ್.ರಾಮಚಂದ್ರಯ್ಯ, ಹಿಂದಿನ ತಾಲ್ಲುಕು ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹಾಲಿ ತಹಸೀಲ್ದಾರ್, ಬೆಂಗಳೂರು ಉತ್ತರ(ಅಪರ) ತಾಲ್ಲೂಕು, ಯಲಹಂಕ.
3) ಎಂ.ನಾಗೇಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
4) ಕೆ.ಸಿ.ಸತೀಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
5) ಮಹಮದ್ ಸಿಗ್ಬತುಲ್ಲಾ, ಹಿಂದಿನ ದ್ವಿ.ದ.ಸ. ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು
6) ಆರ್.ಚಿನ್ನಸ್ವಾಮಿ, ಹಿಂದಿನ ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.

1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧದ ಆರೋಪ ಪಟ್ಟಿಗಳನ್ನು (ಅನುಬಂಧ 1ರಿಂದ 4ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:18-7-2002ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ಆರೋಪಗಳ ಬಗ್ಗೆ ಮೇಲೆ ಕ್ರಮ ಸಂಖ್ಯೆ(3) ರಲ್ಲಿ ಓದಲಾದ 4 ಮಂದಿ ಅಧಿಕಾರಿ/ನೌಕರರು ಮಾತ್ರ ತಮ್ಮ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ಅವರುಗಳ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ ಹಾಗೂ ಉದ್ದೇಶಿತ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಪ್ರಕರಣದಲ್ಲಿನ ಇನ್ನಿಬ್ಬರು ಆಪಾದಿತ ನೌಕರರಾದ ಶ್ರೀ ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ., ಶ್ರೀ ಆರ್.ಚಿನ್ನಸ್ವಾಮಿ, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ಇವರುಗಳಿಗೆ ಜಾರಿಗೊಳಿಸಲಾಗಿದ್ದ ಆರೋಪಗಳ ಬಗ್ಗೆ ಲಿಖಿತ ಉತ್ತರ ಸಲ್ಲಿಸಲು ಅವರುಗಳಿಗೆ ನೀಡಲಾಗಿದ್ದ ಸಮಯಾವಕಾಶ ಮುಗಿದ ನಂತರವೂ ಸಹ ಇಂದಿನವರೆಗೂ ಅವರುಗಳು ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಇವರುಗಳಿಗೆ ಜಾರಿಗೊಳಿಸಲಾಗಿದ್ದ ತಿಳುವಳಿಕೆ ಪತ್ರದಲ್ಲಿ ನಿಗದಿತ ಸಮಯದೊಳಗೆ ಅವರುಗಳ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸದಿದ್ದಲ್ಲಿ ಆ ಬಗ್ಗೆ ಅವರ ಪ್ರತಿವಾದವೇನೂ ಇರುವುದಿಲ್ಲವೆಂದು ಭಾವಿಸಲಾಗುವುದೆಂದು ಸ್ಪಷ್ಟವಾಗಿ ಸೂಚಿಸಿರುವ ಹಿನ್ನೆಲೆಯಲ್ಲಿ ಇವರಿಬ್ಬರ ವಿರುದ್ಧ ಏಕಪಕ್ಷೀಯವಾಗಿ ಹಾಗೂ ಇನ್ನಿತರ ಅಧಿಕಾರಿ/ನೌಕರರ ವಿರುದ್ಧ ಜಾರಿಗೊಳಿಸಲಾಗಿರುವ ದೋಷಾರೋಪಣೆಗಳಿಗೆ ಆಪಾದಿತರು ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ

ಕ್ರಮ ಸಂಖ್ಯೆ(4)ರಲ್ಲಿ ಓದಲಾದ ದಿನಾಂಕ:19-12-2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ವಿ.ತಿಲಗುಲ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಿತ್ತು. ಆದರೆ ಸದರಿಯವರು ಯಾವುದೇ ಕಾರಣ ನೀಡದೆ ಎರಡು ವರ್ಷಗಳು ಕಳೆದರೂ ವಿಚಾರಣೆಯನ್ನು ಪ್ರಾರಂಭಿಸಿರುವುದಿಲ್ಲ ಹಾಗೂ ಆ ಬಗ್ಗೆ ಅವರನ್ನು ಅನೇಕ ಬಾರಿ ಸರ್ಕಾರಿ ಪತ್ರಗಳ ಮೂಲಕ ಸಂಪರ್ಕಿಸಿದರೂ ಸಹ ಅದಕ್ಕೆ ಯಾವುದೇ ಪ್ರತ್ಯುತ್ತರವನ್ನೂ ಸಹ ನೀಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎಸ್.ವಿ.ತಿಲಗುಲ್ ರವರ ಬದಲಿಗೆ ಬೇರೊಬ್ಬರು ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ನೇಮಿಸಲು ಸರ್ಕಾರ ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 48 ಎಡಿಇ 2001, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.415/2, 'ಎಫ್' ಬ್ಲಾಕ್, ಸಹಕಾರನಗರ, ಬೆಂಗಳೂರು-92 ಇವರನ್ನು ಈ ಕೆಳಕಂಡ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

**ಶ್ರೀಯುತರಾದ:**

1) ಬಿ.ಟಿ.ಗೋವಿಂದಮರಿಗೌಡ, ಹಿಂದಿನ ತಹಸೀಲ್ದಾರ್, ಹೊಸಕೋಟೆ ತಾಲ್ಲೂಕು (ಹಾಲಿ ನಿವೃತ್ತರು).
2) ಹೆಚ್.ಎಸ್.ರಾಮಚಂದ್ರಯ್ಯ, ಹಿಂದಿನ ತಾಲ್ಲೂಕು ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹಾಲಿ ತಹಸೀಲ್ದಾರ್, ಬೆಂಗಳೂರು ಉತ್ತರ(ಅಪರ) ತಾಲ್ಲೂಕು, ಯಲಹಂಕ.
3) ಎಂ.ನಾಗೇಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
4) ಕೆ.ಸಿ.ಸತೀಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
5) ಮಹಮದ್ ಸಿಗ್ಬತುಲ್ಲಾ, ಹಿಂದಿನ ದ್ವಿ.ದ.ಸ. ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು
6) ಆರ್.ಚಿನ್ನಸ್ವಾಮಿ, ಹಿಂದಿನ ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿ ಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ ರೂ.1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ಈ ಪ್ರಕರಣದಲ್ಲಿ ಶ್ರೀ ಎಸ್.ವಿ.ತಿಲಗುಲ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವ ದಿನಾಂಕ:19-12-2003ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 48 ಎಡಿಇ 2001ನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

ವಿಚಾರಣಾಧಿಕಾರಿಗಳು ಜಂಟಿ ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 33

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),
ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ಎಂ.ವಿ. ಲಕ್ಷ್ಮೀಪತಿರೆಡ್ಡಿ,ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು ಹಾಲಿ ನಿವೃತ್ತರು ಇವರನ್ನು ಅವರ ವಿರುದ್ಧದ ಆರೋಪಗಳಿಂದ ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ:23-04-2004ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 03 ಎಡಿಇ 2004.

2) ಶ್ರೀ ಎಸ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಈ ಪ್ರಕರಣದ ವಿಚಾರಣಾಧಿಕಾರಿಗಳು ಅವರ ದಿನಾಂಕ:13-12-2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಎಂ.ವಿ.ಲಕ್ಷ್ಮೀಪತಿರೆಡ್ಡಿ,ಹಿಂದಿನ ತಹಶೀಲ್ದಾರ್,ಚಿಂತಾಮಣಿ ತಾಲ್ಲೂಕು (ಹಾಲಿ ನಿವೃತ್ತರು) ಅವರು ಸದರಿ ತಾಲ್ಲೂಕಿನ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಭಾರತೀಯ ದಂಡ ಪ್ರಕ್ರಿಯೆ ಸಂಹಿತೆ ಕಲಂ 107ರನ್ವಯ ಸ್ವೀಕರಿಸಿದ F.I.R.ಅನ್ವಯ ತತ್‌ಕ್ಷಣ ಕಾರ್ಯೋನ್ಮುಖರಾಗದೆ ಕರ್ತವ್ಯದಲ್ಲಿ ನಿರ್ಲಕ್ಷ ಮತ್ತು ವಿಳಂಬ ನೀತಿ ಅನುಸರಿಸಿದ ಕಾರಣ ಚಿಂತಾಮಣಿ ತಾಲ್ಲೂಕು, ಅಂಬಾಜಿದುರ್ಗಾ ಹೋಬಳಿ,ಜಾಗತನಹಳ್ಳಿ ಗ್ರಾಮದಲ್ಲಿ ಗಲಭೆಯಿಂದ ಒಬ್ಬ ವ್ಯಕ್ತಿಯ ಕೊಲೆಯಾಗಿರುವುದಕ್ಕೆ ಕಾರಣರಾಗಿರುವುದಕ್ಕಾಗಿ

ಈ ಆಪಾದನೆಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎಸ್.ಸಿ.ಲಕ್ಷ್ಮೀನರಸಿಂಹಯ್ಯ,ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರ.ಸಂ(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಓದಲಾದ ಕ್ರ.ಸಂ(2)ರಲ್ಲಿ ವಿಚಾರಣಾ ವರದಿ ಸಲ್ಲಿಸಿ ಶ್ರೀ ಲಕ್ಷ್ಮೀಪತಿರೆಡ್ಡಿ,ನಿವೃತ್ತ ತಹಶೀಲ್ದಾರ್,ಇವರ ವಿರುದ್ಧ ಈ ಪ್ರಕರಣದಲ್ಲಿ ಹೊರಿಸಲಾದ ಕರ್ತವ್ಯಲೋಪಗಳನ್ನೊಳಗೊಂಡ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಎಂ.ವಿ.ಲಕ್ಷ್ಮೀಪತಿರೆಡ್ಡಿ,ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು (ಹಾಲಿ ನಿವೃತ್ತರು) ಇವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದು ಸ್ಪಷ್ಟವಾಗಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ:03:ಎಡಿಇ:04,ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಎಂ.ವಿ.ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು ಹಾಲಿ ನಿವೃತ್ತರು ಇವರನ್ನು ಅವರ ವಿರುದ್ಧ ದಿನಾಂಕ:23-04-2004ರ ಸರ್ಕಾರಿ ಆದೇಶ ಸಂಖ್ಯೆ:ಕಂಇ:03:ಎಡಿಇ:2004ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಶ್ರೀ ಎಂ.ವಿ.ಲಕ್ಷ್ಮೀಪತಿರೆಡ್ಡಿ,ಇವರ ವಿರುದ್ಧ ಈ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 34

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),
ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** 2002ನೇ ತಂಡದ ಪರಿವೀಕ್ಷಣಾ ತಹಸೀಲ್ದಾರರುಗಳ {ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿಶೇಷ ನೇಮಕಾತಿ) ನಿಯಮಗಳು 1985ರನ್ವಯ ನೇಮಕಗೊಂಡ} ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 11 ಎಎಸ್‌ಜಿ 2001, ದಿನಾಂಕ: 8-7-2002.
2) ದಾವಣಗೆರೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಸಿಬ್ಬಂದಿ/ಸಿಆರ್/86/02-03, ದಿನಾಂಕ:12-8-2004.
3) ಶಿವಮೊಗ್ಗ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಇಎಸ್‌ಟಿ (1)ಸಿಆರ್:73/04-05, 30-8-2004.
4) ಬೆಂಗಳೂರು ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಎಸಿಟಿ(1)ಸಿಆರ್/70/2002-03, ದಿನಾಂಕ: 5-10-2004.
5) ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಇಎಸ್‌ಟಿ(1)ಸಿಆರ್/32/2002-03, ದಿನಾಂಕ:23-11-2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:8-7-2002ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿಶೇಷ ನೇಮಕಾತಿ) ನಿಯಮಗಳು 1985ರನ್ವಯ 5 ಜನ ಪರಿವೀಕ್ಷಣಾ ತಹಸೀಲ್ದಾರರುಗಳನ್ನು ಪರಿವೀಕ್ಷಣೆಯ ಮೇಲೆ ನೇಮಿಸಿಕೊಂಡು ಎರಡು ವರ್ಷಗಳ ಕಾಲ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಅವರುಗಳು ಎರಡು ವರ್ಷಗಳು ಪರಿವೀಕ್ಷಣೆಯ ಮೇಲೆ ಇರುತ್ತಾರೆಂದು ಮತ್ತು ಅವರುಗಳು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ಕೆಲವು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು.

ನೇಮಿಸಿಕೊಂಡ 5 ಜನ ಪರಿವೀಕ್ಷಣಾ ತಹಸೀಲ್ದಾರರುಗಳು ಎಲ್ಲರೂ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರುಗಳಲ್ಲಿ ಶ್ರೀ ಡಿ.ಷಣ್ಮುಖ, ಶ್ರೀ ಸಿ.ಎಸ್.ಶ್ರೀಧರ್, ಶ್ರೀಮತಿ ಲಕ್ಷ್ಮಮ್ಮ ಹಾಗೂ ಶ್ರೀ ಸತೀಶ್ ಕುಮಾರ್ ಇವರುಗಳು ಎಲ್ಲಾ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯ್ತಿ ಸೇರಿದಂತೆ) ಉತ್ತೀರ್ಣರಾಗಿರುವುದರಿಂದ ಹಾಗೂ ಸದರಿ ಪರಿವೀಕ್ಷಣಾ ತಹಸೀಲ್ದಾರರು ತೃಪ್ತಿಕರವಾಗಿ ಪರಿವೀಕ್ಷಣಾವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆಂದು ತೈನಾತಿಸಿಕೊಂಡ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಿಂದ (5)ರ ಪತ್ರಗಳಲ್ಲಿ ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ 4 ಪರಿವೀಕ್ಷಣಾ ತಹಸೀಲ್ದಾರರು ತೃಪ್ತಿಕರವಾಗಿ ಪರಿವೀಕ್ಷಣಾವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 225 ಎಎಸ್‌ಡಿ 2005, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಾವಣಗೆರೆ, ಶಿವಮೊಗ್ಗ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ವರದಿಯನ್ನು ಅನುಸರಿಸಿ ಈ ಕೆಳಕಂಡ ಪರಿವೀಕ್ಷಣಾ ತಹಸೀಲ್ದಾರರುಗಳು {ಕರ್ನಾಟಕ ಸಿವಿಲ್ ಸೇವೆ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿಶೇಷ ನೇಮಕಾತಿ) ನಿಯಮಗಳು 1985ರಡಿ ನೇಮಕಗೊಂಡ (2002ನೇ ತಂಡ)} **ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.**

| ಕ್ರಮ ಸಂಖ್ಯೆ | ಪರಿವೀಕ್ಷಣಾ ತಹಸೀಲ್ದಾರರ ಹೆಸರು | ಪರಿವೀಕ್ಷಣಾವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಡಿ.ಷಣ್ಮುಖ | 11/07/2002 | 10-7-2004 |
| 2 | ಸಿ.ಎಸ್.ಶ್ರೀಧರ್ | 15/07/2002 | 14-7-2004 |
| 3 | ಪಿ.ಲಕ್ಷ್ಮಮ್ಮ | 12/07/2002 | 11-7-2004 |
| 4 | ಎಂ.ಸತೀಶ್ ಕುಮಾರ್ | 12/07/2002 | 11-7-2004 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 35

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),

ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ಆರ್.ಜಿ.ನಾಡಿಗೇರ.ತಹಶೀಲ್ದಾರ್ ಶಿಗ್ಗಾಂವ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಹಾವೇರಿ ಇವರ ಪತ್ರಸಂಖ್ಯೆ:ಸಿಬ್ಬಂದಿ(2)ವಹಿ90:2005-06 ದಿನಾಂಕ: 08-12-2005.

**ಪ್ರಸ್ತಾವನೆ:**

ಮೇಲೆ ಓದಲಾದ ಜಿಲ್ಲಾಧಿಕಾರಿಗಳು, ಹಾವೇರಿ ಇವರ ಪತ್ರದಲ್ಲಿ ರಾಜ್ಯ ಚುನಾವಣಾ ಆಯೋಗದಿಂದ ಶ್ರೀ ಆರ್.ಜಿ.ನಾಡಿಗೇರ, ತಹಶೀಲ್ದಾರ್, ಶಿಗ್ಗಾಂವ ಇವರು ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿ ಸಾರ್ವತ್ರಿಕ ಚುನಾವಣೆ 2005 ತಾಲ್ಲೂಕು ಪಂಚಾಯತಿ ಚುನಾವಣೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳಿಂದ "ಬಿ" ಫಾರಂಗಳನ್ನು ಸ್ವೀಕರಿಸಲು ಯಾವುದೇ ಅಧಿಕಾರ ಇಲ್ಲದಿದ್ದರು ಸಹ "ಬಿ" ಫಾರಂಗಳನ್ನು ನಿಗಧಿತ ಅವಧಿಯ ನಂತರ ಸ್ವೀಕರಿಸಿ ಅದರಲ್ಲಿ ಸಮಯ ಮತ್ತು ದಿನಾಂಕವನ್ನು ನಮೂದಿಸಿರುತ್ತಾರೆ. "ಬಿ" ಫಾರಂಗಳನ್ನು ಚುನಾವಣಾಧಿಕಾರಿಗಳು ಸ್ವೀಕರಿಸಬೇಕೇ ಹೊರತು ತಹಶೀಲ್ದಾರರು ಅದನ್ನು ಸ್ವೀಕರಿಸಿ ಚುನಾವಣಾಧಿಕಾರಿಗಳಿಗೆ ನೀಡುವುದು ಸೂಕ್ತವಲ್ಲ. ಈ ರೀತಿ "ಬಿ" ಫಾರಂಗಳನ್ನು ಸ್ವೀಕರಿಸಲು ತಹಶೀಲ್ದಾರ್,ಶಿಗ್ಗಾಂವ ಇವರಿಗೆ ಯಾವುದೇ ರೀತಿಯ ಅಧಿಕಾರವಿಲ್ಲದಿದ್ದರೂ ಇವರು ಚುನಾವಣಾ ಪ್ರಕ್ರಿಯೆಯಲ್ಲಿ ಭಾಗವಹಿಸಿರುವುದು ಕಾನೂನು ಬಾಹಿರವಾಗಿರುತ್ತದೆ. ಇದರಿಂದ ಮೂರು ಆಭ್ಯರ್ಥಿಗಳು ಒಂದು ರಾಷ್ಟ್ರೀಯ ಪಕ್ಷದಿಂದ ಸ್ಪರ್ಧಿಸುವ ಅವಕಾಶದಿಂದ ವಂಚಿತರಾಗಿರುತ್ತಾರೆ, ಹಾಗೂ ಚುನಾವಣಾ ಸಮಯದಲ್ಲಿ ಅನಗತ್ಯ ಗೊಂದಲ ಸೃಷ್ಟಿಸಲು ಕಾರಣರಾಗಿರುತ್ತಾರೆ. ಅದ್ದರಿಂದ ಶ್ರೀ ಆರ್.ಜಿ.ನಾಡಿಗೇರ್,ತಹಶೀಲ್ದಾರ್, ಶಿಗ್ಗಾಂವ ಇವರು ಕಾನೂನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದು, ಇವರನ್ನು ತಕ್ಷಣದಿಂದ ನಿಲಂಬನೆಯಲ್ಲಿಟ್ಟು ವಿಚಾರಣೆ ನಡೆಸಲು ಮುಂದಿನ ಕ್ರಮ ಕೈಗೊಳ್ಳಲು ಕೋರಿರುತ್ತಾರೆ ಎಂದು ತಿಳಿಸಲಾಗಿದೆ. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಅಧಿಕಾರಿಯನ್ನು ಇಲಾಖಾ ವಿಚಾರಣೆ ಹೂಡಲು ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ:ಕಂಇ:59:ಏಡಿಎ:2005,ಬೆಂಗಳೂರು, ದಿನಾಂಕ:16ನೇ ಡಿಸೆಂಬರ್ 2005**

ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿಗಳು1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಜಿ. ನಾಡಿಗೇರ, ತಹಶೀಲ್ದಾರ್, ಶಿಗ್ಗಾಂವ ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ,ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಅದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅರೋಪಿತ ಅಧಿಕಾರಿಯು,ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು,ಹಾವೇರಿ ಇವರ ಅನುಮತಿ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 37

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),

ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ಎಂ.ಬಿ.ಬಣಕಾರ್, ನಿವೃತ್ತ ತಹಸೀಲ್ದಾರ್ ಇವರಿಗೆ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತ ಹಾಗೂ ನಿವೃತ್ತಿ ವೇತನದ ವ್ಯತ್ಯಾಸದ ಮೊತ್ತಕ್ಕೆ ಬಡ್ಡಿ ಹಣ ಪಾವತಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಧಾರವಾಡ ಇವರ ಪತ್ರ ಸಂಖ್ಯೆ:ಕ್ರ:ಲೆವಿ:ವಹಿ:7:98-99, ದಿನಾಂಕ: 14-9-2005.
2) ಸರ್ಕಾರಿ ವಕೀಲರು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಇವರ ಪತ್ರ ಸಂಖ್ಯೆ: 12512/ಎಜಿ/ಕೆಎಟಿ/0506, ದಿನಾಂಕ:3-12-2005.
3) ಜಿಲ್ಲಾಧಿಕಾರಿಗಳು, ಧಾರವಾಡ, ಇವರ ಪತ್ರ ಸಂಖ್ಯೆ:ಲೆವಿ:ವಹಿ:126:0506, ದಿನಾಂಕ: 5-12-2005 ಹಾಗೂ 21-12-2005.
4) ಸರ್ಕಾರಿ ಆದೇಶ ಸಂಖ್ಯೆ: ಆಇ(ವಿಶೇಷ) 199 ಪಿಇಎಸ್ 93, ದಿ:13-9-94.

**ಪ್ರಸ್ತಾವನೆ:**

ಶ್ರೀ ಎಂ.ಬಿ.ಬಣಕಾರ್, ನಿವೃತ್ತ ತಹಸೀಲ್ದಾರ್ ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ:9795/1986ರಲ್ಲಿನ ದಿನಾಂಕ:12-8-1988ರ ಆದೇಶವನ್ನು ಪಾಲಿಸಿಲ್ಲವೆಂದು ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ:269/2005ನ್ನು ದಾಖಲಿಸಿರುತ್ತಾರೆ. ಈ ನ್ಯಾಯಾಲಯ ನಿಂದನಾ ಅರ್ಜಿಯ ವಿಚಾರಣಾ ಸಮಯದಲ್ಲಿ ಮಾನ್ಯ

ನ್ಯಾಯಮಂಡಳಿಯು ಸೂಚಿಸಿದಂತೆ ಅರ್ಜಿ ಸಂಖ್ಯೆ:9795/1986ರ ಆದೇಶವನ್ನು ಪಾಲಿಸಿದ ಬಗ್ಗೆ ಜಿಲ್ಲಾಧಿಕಾರಿಗಳು ಧಾರವಾಡ ಇವರು ದಿನಾಂಕ:20-9-2005ರಂದು ಮಾನ್ಯ ನ್ಯಾಯಮಂಡಳಿಯು Counter Affidavitನ್ನು ಸಲ್ಲಿಸಿರುತ್ತಾರೆ. ಈ Counter Affidavitನ್ನು ಪರಿಶೀಲಿಸಿದ ನ್ಯಾಯಾಲಯವು ಅರ್ಜಿ ಸಂಖ್ಯೆ: 9795/1986, ದಿನಾಂಕ:12-8-1988ರ ಆದೇಶದಲ್ಲಿನ ಉಳಿದ ಭಾಗದ ಆದೇಶವನ್ನು ಪಾಲಿಸಿ ದಿನಾಂಕ:23-12-2005ರೊಳಗೆ ನ್ಯಾಯಾಲಯಕ್ಕೆ ಅನುಸರಣಾ ವರದಿ ನೀಡಲು ದಿನಾಂಕ: 25-11-2005ರಂದು ಆದೇಶವನ್ನು ನೀಡಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಸರ್ಕಾರಿ ವಕೀಲರ ಪತ್ರದಲ್ಲಿ ಮಾನ್ಯ ನ್ಯಾಯಮಂಡಳಿಯ ಆದೇಶವನ್ನು ಕಳುಹಿಸಿ ಕೊಡಲಾಗಿದೆ. ಅದರಂತೆ ಧಾರವಾಡ ಜಿಲ್ಲಾಧಿಕಾರಿಯವರಿಗೆ ಪತ್ರ ಬರೆದು ಈ ನಿವೃತ್ತ ಅಧಿಕಾರಿಗೆ ಪಾವತಿ ಮಾಡಬೇಕಾದ ಪಿಂಚಣಿ ವ್ಯತ್ಯಾಸದ ಮೊತ್ತದ ಮೇಲಿನ ಬಡ್ಡಿ ಹಣವನ್ನು ಲೆಕ್ಕಾಚಾರ ಮಾಡಿ ಕಳುಹಿಸಿ ಕೊಡಲು ಕೋರಲಾಗಿತ್ತು. ಅದರಂತೆ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಪತ್ರದಲ್ಲಿ ಮಾಹಿತಿಯನ್ನು ನೀಡಿರುತ್ತಾರೆ. ಈ ಮಾಹಿತಿಯನ್ವಯ ನಿವೃತ್ತ ತಹಸೀಲ್ದಾರ ರಿಗೆ ನಿವೃತ್ತ ಉಪದಾನದ ವ್ಯತ್ಯಾಸದ ಮೊತ್ತ ಹಾಗೂ ನಿವೃತ್ತಿ ವೇತನದ ವ್ಯತ್ಯಾಸದ ಮೊತ್ತದ ಮೇಲೆ ಬಡ್ಡಿ ಹಣ ಪಾವತಿಸುವ ಬಗ್ಗೆ ಪರಿಶೀಲಿಸಲಾಯಿತು.

ನಿವೃತ್ತ ನೌಕರರಿಗೆ ಸರ್ಕಾರದಿಂದ ತಡವಾಗಿ ಪಾವತಿಯಾದ ಪಿಂಚಣಿ ಉಪದಾನಗಳ ಮೇಲೆ ಬಡ್ಡಿ ನೀಡುವ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ (ಸ್ಪೆಷಲ್) 864 ಪಿಇಎನ್ 84, ದಿನಾಂಕ:14-8-1985ರಲ್ಲಿ ತಿಳಿಸಲಾಗಿದೆ.

ಶ್ರೀ ಎಂ.ಬಿ.ಬಣಕಾರ್ ಇವರು ದಿನಾಂಕ:1-4-1977ರಂದು ಸರ್ಕಾರದ ಸೇವೆಯಿಂದ ನಿವೃತ್ತರಾಗಿದ್ದು, ಇವರ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತ ರೂ.990/-ನ್ನು ಮಹಾಲೇಖಪಾಲರು ದಿನಾಂಕ:29-5-2003ರಂದು ಪ್ರಾಧೀಕರಿಸಿರುತ್ತಾರೆ. ಅಂತೆಯೇ ನಿವೃತ್ತ ವೇತನದ ವ್ಯತ್ಯಾಸದ ಮೊತ್ತ ರೂ.18/-ನ್ನು ದಿನಾಂಕ: 1-4-1977 ರಿಂದ ಪಾವತಿಸಲು ದಿನಾಂಕ: 29-5-2003ರಂದು ಪ್ರಾಧೀಕರಣ ಪತ್ರ ನೀಡಿರುವುದು ಹಾಗೂ ರೂ.8/-ನ್ನು ದಿನಾಂಕ: 1-12-1985ರಿಂದ ಪಾವತಿಸಲು ದಿ:9-5-2003ರಂದು ಪ್ರಾಧೀಕರಣ ಪತ್ರ ನೀಡಲಾಗಿದೆ. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:9795/1986, ದಿನಾಂಕ: 12-8-1988ರ ಆದೇಶದಂತೆ ಹಾಗೂ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ:269/2005 ರಲ್ಲಿನ ಸೂಚನೆಯಂತೆ ಕ್ರಮ ತೆಗೆದುಕೊಳ್ಳುವುದು ಅವಶ್ಯವಿರುವುದರಿಂದ ಶ್ರೀ ಎಂ.ಬಿ.ಬಣಕಾರ್, ನಿವೃತ್ತ ತಹಸೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತ ರೂ.990/-ರ ಮೇಲೆ ದಿನಾಂಕ:14-8-1985ರಿಂದ 12-9-1994ರವರೆಗೆ ಶೇ.10ರ ವಾರ್ಷಿಕ ದರದಲ್ಲಿ ಮತ್ತು ದಿನಾಂಕ:13-9-1994ರಿಂದ 30-4-2003ರವರೆಗೆ ಶೇ.12ರ ವಾರ್ಷಿಕ ದರದಲ್ಲಿ ಬಡ್ಡಿ ಪಾವತಿಸಲು ಹಾಗೂ ವಿಳಂಬವಾಗಿ ಪಾವತಿಸಲಾದ ಮೂಲ ನಿವೃತ್ತಿ ವೇತನದ ವ್ಯತ್ಯಾಸದ ಮೊತ್ತದ ಮೇಲೆ ದಿನಾಂಕ: 13-9-1994ರಿಂದ 30-4-2003ರವರೆಗೆ ಶೇ.12ರ ವಾರ್ಷಿಕ ದರದಲ್ಲಿ ಇಳಿಮುಖವಾಗಿ ಬಡ್ಡಿ ಪಾವತಿಸಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 167 ಎಎಸ್‌ಡಿ 2005, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಂ.ಬಿ.ಬಣಕಾರ್, ನಿವೃತ್ತ ತಹಸೀಲ್ದಾರ್ ಇವರಿಗೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿನ ಅರ್ಜಿ ಸಂಖ್ಯೆ:9795/1986, ದಿನಾಂಕ:12-8-1988ರ ಆದೇಶದಂತೆ ಹಾಗೂ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ:269/2005ರಲ್ಲಿನ ದಿನಾಂಕ:25-11-2005ರನ್ವಯ ಹಾಗೂ ಆದೇಶ ಸಂಖ್ಯೆ: ಆಇ(ವಿಶೇಷ) 199 ಪಿಇಎನ್ 93, ದಿ:13-9-94ರನ್ವಯ ಈ ಕೆಳಕಂಡಂತೆ ಬಡ್ಡಿ ಹಣವನ್ನು ಮಂಜೂರು ಮಾಡಿ ಆದೇಶಿಸಿದೆ.

ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತ ರೂ.990/-ರ ಮೇಲೆ ದಿನಾಂಕ:14-8-1985ರಿಂದ 12-9-1994ರವರೆಗೆ ಶೇ.10ರ ವಾರ್ಷಿಕ ದರದಲ್ಲಿ ಮತ್ತು ದಿನಾಂಕ:13-9-1994ರಿಂದ 30-4-2003ರವರೆಗೆ ಶೇ.12ರ ವಾರ್ಷಿಕ ದರದಲ್ಲಿ ಬಡ್ಡಿ ಪಾವತಿಸಲು ಹಾಗೂ ವಿಳಂಬವಾಗಿ ಪಾವತಿಸಲಾದ ಮೂಲ ನಿವೃತ್ತಿ ವೇತನದ ವ್ಯತ್ಯಾಸದ ಮೊತ್ತದ ಮೇಲೆ ದಿನಾಂಕ:13-9-1994ರಿಂದ 30-4-2003ರವರೆಗೆ ಶೇ.12ರ ವಾರ್ಷಿಕ ದರದಲ್ಲಿ ಇಳಿಮುಖವಾಗಿ ಬಡ್ಡಿಲೆಕ್ಕಾಚಾರ ಹಾಕಿ ಪಾವತಿಸಲು ಆದೇಶಿಸಲಾಗಿದೆ. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಅದರಂತೆ ಕ್ರಮ ತೆಗೆದುಕೊಳ್ಳಲು ಸೂಚಿಸಿದೆ.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ:12-8-1988ರ ಆದೇಶದಂತೆ ಕ್ರಮ ತೆಗೆದುಕೊಳ್ಳಲು ವಿಳಂಬವಾಗಿರುವುದರಿಂದ ಬಡ್ಡಿ ಪಾವತಿಸಬೇಕಾಗಿದ್ದು, ಇದರಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿದೆ. ಬಡ್ಡಿ ಪಾವತಿಸುವುದರಿಂದ ಉಂಟಾಗಿರುವ ಆರ್ಥಿಕ ನಷ್ಟವನ್ನು ವಿಳಂಬಕ್ಕೆ ಕಾರಣರಾದ ಅಧಿಕಾರಿ/ನೌಕರರಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಶಾಖೆಯ ದಿ:22-12-2005ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ(ವಿ)2869/05(ಎ)ರಲ್ಲಿ ನೀಡಿದ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 42

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),
ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ಕೆ.ಎಸ್.ರಾಮಾಂಜನಪ್ಪ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ಮತ್ತು ಶ್ರೀಮತಿ ಕೆ.ಎಸ್.ಪ್ರೇಮಲತಾ ಶೆಟ್ಟಿ,ದ್ವಿ.ದ.ಸ. ಬೆಂಗಳೂರು ಉತ್ತರ ತಾಲ್ಲೂಕು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**

1) ಜಿಲ್ಲಾಧಿಕಾರಿ,ಬೆಂಗಳೂರು ನಗರ ಜಿಲ್ಲೆ,ಬೆಂಗಳೂರು ಇವರ ದಿ:18-06-01ರ ಪತ್ರ ಸಂಖ್ಯೆ:ಇಎಸ್ಟಿ(2) ಸಿಸಿಎ/ಸಿಆರ್/17/98-99
2) ದಿ:24-03-04ರ ಕಾರಣ ಕೇಳುವ ನೋಟೀಸು ಸಂಖ್ಯೆ:ಅರ್‌ಡಿ 57 ಎಡಿಇ 2001
3) ಲಿಖಿತ ಉತ್ತರ: 1) ಶ್ರೀಮತಿ ಕೆ.ಎಸ್.ಪ್ರೇಮಲತಾಶೆಟ್ಟಿ - ದಿ: 24-04-04
   2) ಶ್ರೀ ಕೆ.ಎಸ್.ರಾಮಾಂಜನಪ್ಪ - ದಿ: 26-06-04

ಪ್ರಸ್ತಾವನೆ:

ಶ್ರೀಮತಿ ಕೆ.ಎಸ್.ಪ್ರೇಮಲತಾಶೆಟ್ಟಿ,ದ್ವಿತೀಯ ದರ್ಜೆ ಸಹಾಯಕರು ಇವರನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ದಿ:2-6-99ರ ಆದೇಶ ಸಂ:ಇಎಸ್‌ಟಿ(2)ಸಿಸಿಎ/ಸಿಆರ್/17/98-99ರಂತೆ ಆನೇಕಲ್ ತಾಲ್ಲೂಕ್ ಕಛೇರಿಗೆ ವರ್ಗಾಯಿಸಲಾಗಿತ್ತೆಂದು ಆದರೆ ಸದರಿ ಆದೇಶದಂತೆ ವರ್ಗಾವಣೆಯಾದ ಆನೇಕಲ್ ತಾಲ್ಲೂಕು ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದ್ದರ ಮೇರೆಗೆ ದಿ:25-9-99ರ ಅಧಿಕೃತ ಜ್ಞಾಪನದಂತೆ ಸದರಿ ನೌಕರರನ್ನು ನಿಯೋಜನೆ ಮೇರೆಗೆ ಬೆಂಗಳೂರು ಉತ್ತರ ತಾಲ್ಲೂಕಿಗೆ ನೇಮಿಸಲಾಗಿತ್ತೆಂದು ಇದನ್ನು ಸರಿಯಾಗಿ ಪರಿಶೀಲಿಸದೆ ಅಂದಿನ ಬೆಂಗಳೂರು ಉತ್ತರ ತಾಲ್ಲೂಕಿನ ತಹಶೀಲ್ದಾರರಾಗಿದ್ದ ಹಾಗೂ ಹಾಲಿ ತಹಶೀಲ್ದಾರ್,ಪ್ರಾದೇಶಿಕ ಆಯುಕ್ತರ ಕಛೇರಿ(ಕಂದಾಯ)ಬೆಂಗಳೂರು ಆಗಿರುವ ಶ್ರೀ ಕೆ.ಎಸ್.ರಾಮಾಂಜನಪ್ಪನವರು ಸದರಿ ನೌಕರರಿಗೆ ಸಂಬಳ,ಭತ್ಯೆ,ಇತ್ಯಾದಿಗಳನ್ನು ವಿತರಿಸಿ ಮೇಲಧಿಕಾರಿಗಳ ಆದೇಶವನ್ನು ಪಾಲಿಸದೇ ಕರ್ತವ್ಯಚ್ಯುತಿ ಎಸಗಿರುತ್ತಾರೆಂಬ ಹಾಗೂ ದ್ವಿ.ದ.ಸ.ರಾದ ಶ್ರೀಮತಿ ಕೆ.ಎಸ್.ಪ್ರೇಮಲತಾಶೆಟ್ಟಿಯವರು ಆನೇಕಲ್ ತಾಲ್ಲೂಕಿಗೆ ಅನ್ವಯವಾಗುವ ನಗರ ಭತ್ಯೆ ಮತ್ತು ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಾಗಿದ್ದರೂ ಬೆಂಗಳೂರು ನಗರಕ್ಕೆ ಅನ್ವಯವಾಗುವ ನಗರ ಭತ್ಯೆ ಮತ್ತು ಮನೆ ಬಾಡಿಗೆ ಭತ್ಯೆ ಪಡೆದಿರುವುದು ಇವರ ಕರ್ತವ್ಯಚ್ಯುತಿಯಾಗಿರುವುದೆಂದು ವರದಿ ಮಾಡಿರುವ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಇವರಿಬ್ಬರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ(1)ರಲ್ಲಿ ಓದಲಾದ ದಿ:18-06-01ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು(ಅನುಬಂಧ-1-4ರವರೆಗೆ) ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿ:24-03-04ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿ ಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಕೆ.ಎಸ್.ರಾಮಾಂಜನಪ್ಪ,ತಹಶೀಲ್ದಾರ್ ಹಾಗೂ ಶ್ರೀಮತಿ ಕೆ.ಎಸ್.ಪ್ರೇಮಲತಾಶೆಟ್ಟಿ ದ್ವಿ.ದ.ಸ. ಇವರುಗಳು ಮೇಲೆ ಕ್ರ.ಸಂ(3)ರಲ್ಲಿ ಓದಲಾದ ವಿವಿಧ ದಿನಾಂಕಗಳಂದು ತಮ್ಮ ಲಿಖಿತ ಹೇಳಿಕೆಯಲ್ಲಿ ಅವರುಗಳ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೇ ಅಲ್ಲಗೆಳೆದಿರುತ್ತಾರೆ. ಅದುದರಿಂದ,ಆರೋಪಿತರೆಂದು ಹೇಳಲಾಗಿರುವ ಅಧಿಕಾರಿ ಹಾಗೂ ನೌಕರರ ವಿರುದ್ಧ ಆರೋಪಗಳು ಹಾಗೂ ಅದಕ್ಕೆ ಅವರುಗಳು ಸಲ್ಲಿಸಿರುವ ಲಿಖಿತ ಉತ್ತರದ ಸತ್ಯಾತ್ಯತೆಯನ್ನು ಕಂಡುಕೊಳ್ಳುವ ದೃಷ್ಠಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ:57:ಎಡಿಇ:2001,ಬೆಂಗಳೂರು ದಿನಾಂಕ: 22ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎಸ್.ರಾಮಾಂಜನಪ್ಪ ಹಿಂದಿನ ತಹಶೀಲ್ದಾರ್ ಬೆಂಗಳೂರು ಉತ್ತರ ತಾಲ್ಲೂಕ್ ಹಾಲಿ ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ (ಕಂದಾಯ) ಬೆಂಗಳೂರು ಹಾಗೂ ಶ್ರೀಮತಿ ಕೆ.ಎಸ್.ಪ್ರೇಮಲತಾಶೆಟ್ಟಿ, ದ್ವಿ.ದ.ಸ.ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಬೆಂಗಳೂರು ಇವರುಗಳ ಮೇಲಿನ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.415/2 F ಬ್ಲಾಕ್ ಸಹಕಾರನಗರ, ಬೆಂಗಳೂರು-560092 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿ ಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ:45:ಸೇಇವಿ:2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 43

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ), ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಸೀಮೆಎಣ್ಣೆಯ ಅವ್ಯವಹಾರದ ಬಗ್ಗೆ ಅಂದಿನ ತಹಶೀಲ್ದಾರ್‌ರಾಗಿದ್ದ ಶ್ರೀ ರಂಜಾನ್ ಅಲಿ,(ಹಾಲಿ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ಬಳ್ಳಾರಿ ಜಿಲ್ಲೆಯ ಜಿಲ್ಲಾಧಿಕಾರಿಗಳ ದಿ:26-7-99ರ ಪತ್ರ ಸಂಖ್ಯೆ ಅನಾಸ 16 ಸಿಬ್ಬಂದಿ 3/99-2000
2) ದಿ:22-7-99ರ ತಿಳುವಳಿಕೆ ಪತ್ರ (ಕಾರಣ ಕೇಳುವ ನೋಟೀಸು)ಸಂಖ್ಯೆ: ಅರ್‌ಡಿ 40 ಎಡಿಇ 99
3) ಶ್ರೀ ರಂಜಾನ್ ಅಲಿಯವರ ದಿ:03-8-99ರ ಲಿಖಿತ ಉತ್ತರ
4) ಬಳ್ಳಾರಿ ಜಿಲ್ಲಾಧಿಕಾರಿಗಳ ದಿ:18-9-03ರ ಪತ್ರ ಸಂಖ್ಯೆ:ಅನಾಸ/3/ಸಿಬ್ಬಂದಿ 3/99-2000
5) ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ,ಬೆಂಗಳೂರು- ಇವರ ದಿ:23-3-05ರ ಪತ್ರ ಸಂಖ್ಯೆ:ಸಿಎಫ್‌ಎಸ್/ಇಎಸ್‌ಟಿ (2)70/99-2000.

ಪ್ರಸ್ತಾವನೆ:

ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿರುವ ಪಡಿತರ ಕಾರ್ಡುದಾರರಿಗೆ ಸೀಮೆಎಣ್ಣೆಯ ವಿತರಣೆಯ ಪ್ರಮಾಣದ ಬಗ್ಗೆ ಪ್ರತಿ ತಿಂಗಳು ಆಹಾರ ಇಲಾಖೆಯ ಕಾರ್ಯನಿರ್ವಾಹಕ ಸಿಬ್ಬಂದಿಯ ಮಾಸಿಕ ಸಭೆಯಲ್ಲಿ ಪ್ರತಿ ಕಾರ್ಡಿಗೆ ವಿತರಣೆ ಮಾಡಬೇಕಾದ ಪ್ರಮಾಣವನ್ನು ನಿರ್ಧರಿಸಿ ಅದರಂತೆ ಲಿಖಿತ ಹಂಚಿಕೆ ಅದೇಶವನ್ನು ಆಯಾ ತಾಲ್ಲೂಕಿಗೆ ತಿಳಿಸುತ್ತಾ ಬಂದಿರುವುದಾಗಿ,ಆದರೆ ಸದರಿ ಜಿಲ್ಲೆಯ ಹಗರಿ ಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕಾರ್ಡುದಾರರಿಗೆ ನಿಗದಿತ ಪ್ರಮಾಣದಂತೆ ಸೀಮೆಎಣ್ಣೆಯನ್ನು ಪೂರೈಸುತ್ತಿಲ್ಲವೆಂಬ ಬಗ್ಗೆ ಸದರಿ ತಾಲ್ಲೂಕಿನ ಸಾರ್ವಜನಿಕರಿಂದ ಸ್ವೀಕರಿಸಿದ ದೂರು ಅರ್ಜಿಯನ್ನು ಪರಿಶೀಲಿಸಲಾಗಿ,ಅದರಲ್ಲಿ ಸತ್ಯಾಂಶವಿರುವುದು ಕಂಡುಬಂದಿರುವುದರಿಂದ ಸದರಿ ತಾಲ್ಲೂಕಿನ ಅಂದಿನ ತಹಶೀಲ್ದಾರರಾಗಿದ್ದ ಶ್ರೀ ರಂಜಾನ್ ಅಲಿಯವರ ಕರ್ತವ್ಯ ನಿರ್ಲಕ್ಷತೆ ಹಾಗೂ ಅಧಿಕಾರ ದುರುಪಯೋಗದ ಬಗ್ಗೆ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:26-7-99 ರ ಪತ್ರದಲ್ಲಿ ಬಳ್ಳಾರಿ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಅದರಂತೆ ಆಪಾದಿತ ಅಧಿಕಾರಿ ಶ್ರೀ ರಂಜಾನ್ ಆಲಿ ರವರಿಗೆ ಅವರ ವಿರುದ್ಧದ ದೋಷಾರೋಪಣೆ ಪಟ್ಟಿಗಳೊಂದಿಗೆ ಮೇಲೆ ಕ್ರ.ಸಂಖ್ಯೆ:(2)ರಲ್ಲಿ ಓದಲಾಗಿರುವ ದಿ:22-7-99ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಸದರಿ ಅಧಿಕಾರಿ ಸಲ್ಲಿಸಿರುವ ಮೇಲೆ ಕ್ರ.ಸಂ(3)ರಲ್ಲಿ ಓದಲಾಗಿರುವ ದಿನಾಂಕ:3-8-99ರ ಲಿಖಿತ ಉತ್ತರದಲ್ಲಿ ಅವರ ವಿರುದ್ಧದ ಆರೋಪಗಳನ್ನು ಸಾರಾಸಗಟಾಗಿ ಅಲ್ಲಗೆಳೆದಿದ್ದು ಈ ಪ್ರಕರಣದಲ್ಲಿ ಆಹಾರ ಇಲಾಖೆಯ ಸಿಬ್ಬಂದಿಯೇ ನೇರ ಹೊಣೆಗಾರರಾಗಿರುತ್ತಾರೆಂದು, ಆದುದರಿಂದ ಅವರನ್ನು ಆರೋಪಮುಕ್ತರಾಗಿಸುವಂತೆ ಕೋರಿರುತ್ತಾರೆ. ಆಹಾರ ಇಲಾಖೆಯ ಇತರೆ ಸಿಬ್ಬಂದಿಯ ಪಾತ್ರದ ಬಗ್ಗೆ ಬಳ್ಳಾರಿ ಜಿಲ್ಲಾಧಿಕಾರಿಗಳ ಅಭಿಪ್ರಾಯವನ್ನು ಕೇಳಲಾಗಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರ ದಿ:01-12-99ರ ಪತ್ರ ಸಂ:ಸಿಎಫ್‌ಎಸ್/ಇಎಸ್‌ಟಿ(2)70/99-2000 ರಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಹಗರಿಬೊಮ್ಮನಹಳ್ಳಿ ತಾಲ್ಲೂಕು ಕಛೇರಿಯ ತಹಶೀಲ್ದಾರ್, ಆಹಾರ ಶಿರಸ್ತೇದಾರ್ ಮತ್ತು ಆಹಾರ ನಿರೀಕ್ಷಕರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೂಲ ದಾಖಲೆಗಳೊಂದಿಗೆ ದಿನಾಂಕ:18-1-2000ದ ಪತ್ರ ಸಂಖ್ಯೆ ಅನಾಸೆ/3/ಸಿಬ್ಬಂದಿ/3/99/2000ರೊಂದಿಗೆ ಆಹಾರ ಇಲಾಖೆಯ ಆಯುಕ್ತರಿಗೆ ಸಲ್ಲಿಸಿರುವುದಾಗಿ ಮೇಲೆ ಕ್ರ.ಸಂ(4)ರಲ್ಲಿ ಓದಲಾದ ದಿನಾಂಕ:18-9-2003ರ ಪತ್ರದಲ್ಲಿ ಬಳ್ಳಾರಿ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ತಹಶೀಲ್ದಾರರನ್ನೊಳಗೊಂಡಂತೆ ಜಂಟಿ ಇಲಾಖಾ ವಿಚಾರಣೆ ಬಗ್ಗೆ ಅಗತ್ಯ ಮಾಹಿತಿಯನ್ನು ಕಂದಾಯ ಇಲಾಖೆಗೆ ಒದಗಿಸುವಂತೆ ಸಚಿವಾಲಯದ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯನ್ನು ಹಾಗೂ ಆಯುಕ್ತರು,ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ,ಬೆಂಗಳೂರು ಇವರನ್ನು ಹಲವಾರು ಅರೆ ಸರ್ಕಾರಿ ಪತ್ರಗಳ ಮೂಲಕ ಕೋರಲಾಗಿತ್ತು. ದೀರ್ಘ ಪತ್ರ ವ್ಯವಹಾರದ ನಂತರ ಈ ಪ್ರಕರಣದಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಂದಿನ ಆಹಾರ ಶಿರಸ್ತೇದಾರ್ ಮತ್ತು ಆಹಾರ ನಿರೀಕ್ಷಕರ ವಿರುದ್ಧ ಮಾತ್ರ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಆ ಬಗ್ಗೆ ದಿನಾಂಕ:3-10-2002ರಂದು ಅಂತಿಮ ಆದೇಶವನ್ನು ಹೊರಡಿಸಿರುವುದಾಗಿ ಉಳಿದಂತೆ ತಹಶೀಲ್ದಾರರ ವಿರುದ್ಧ ಕ್ರಮ ಜರುಗಿಸುವಂತೆ ಬಳ್ಳಾರಿ ಜಿಲ್ಲಾಧಿಕಾರಿಗಳು ಸರ್ಕಾರದ ಕಾರ್ಯದರ್ಶಿ,ಕಂದಾಯ ಇಲಾಖೆ ಇವರಿಗೆ ಪತ್ರ ಬರೆದಿರುವುದರಿಂದ, ಸದರಿ ತಹಶೀಲ್ದಾರರು ಆಹಾರ ಇಲಾಖೆಯ ವ್ಯಾಪ್ತಿಗೆ ಒಳಪಡದಿರುವುದರಿಂದ ಹಾಗೂ ಸದರಿ ತಹಶೀಲ್ದಾರರಿಗೆ ಸರ್ಕಾರದ ಕಂದಾಯ ಇಲಾಖೆಯು ದೋಷಾರೋಪಣಾ ಪಟ್ಟಿ ಹೊರಡಿಸಿರುವುದರಿಂದ ಆಹಾರ ಇಲಾಖೆಯಿಂದ ಸದರಿ ತಹಶೀಲ್ದಾರರ ವಿರುದ್ಧ ಯಾವುದೇ ಕ್ರಮ ವಹಿಸಿರುವುದಿಲ್ಲವೆಂದು ಮೇಲೆ ಕ್ರ.ಸಂ(5)ರಲ್ಲಿ ಓದಲಾದ ದಿ:23-3-05ರ ಪತ್ರದಲ್ಲಿ ಆಹಾರ ಇಲಾಖೆಯ ಆಯುಕ್ತರು ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಶ್ರೀ ರಂಜಾನ್ ಅಲಿ ಹಿಂದಿನ ತಹಶೀಲ್ದಾರ್ ಹಗರಿಬೊಮ್ಮನಹಳ್ಳಿ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧದ ಆರೋಪಗಳ ಹಾಗೂ ಅದಕ್ಕೆ ಅವರು ಸಲ್ಲಿಸಿರುವ ಲಿಖಿತ ಉತ್ತರದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ:ಅರ್‌ಡಿ:40:ಎಡಿಇ:99,ಬೆಂಗಳೂರು ದಿನಾಂಕ: 5ನೇ ಜನವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಂಜಾನ್ ಅಲಿ, ಹಿಂದಿನ ತಹಶೀಲ್ದಾರ್ ಹಗರಿಬೊಮ್ಮನಹಳ್ಳಿ ತಾಲ್ಲೂಕು, ಹಾಲಿ ನಿವೃತ್ತರು ಇವರ ವಿರುದ್ಧ ಹೊರಿಸಲಾಗಿರುವ ಆರೋಪಗಳ ಕುರಿತು ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್,ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವಿಹಾಳ್ ಅಂಚೆ,ಸಿಂಧನೂರು ತಾಲ್ಲೂಕು ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಳ್ಳಾರಿ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಅವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000 (ಐದು ಸಾವಿರ ರೂಪಾಯಿಗಳು ಮಾತ್ರ)ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಅದೇಶ ಸಂಖ್ಯೆ:ಸಿಆಸುಇ:45: ಸೇಇವಿ:2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ)ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಳ್ಳಾರಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 90

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ತೋಟಗಾರಿಕೆ ಇಲಾಖೆಯ ದಿನಗೂಲಿ ನೌಕರರುಗಳ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 250 ಜಿಪಅ 05, ದಿನಾಂಕ: 16.12.2005, 22.12.2005 ಮತ್ತು 24.12.2005.

**ಪ್ರಸ್ತಾವನೆ:**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ವಿವಿಧ ಇಲಾಖೆಗಳಲ್ಲಿ ದಿನಾಂಕ: 1.7.1984ರ ನಂತರ ಸರ್ಕಾರಿ ಸೇವೆಗೆ ಸೇರಿ ದಿನಗೂಲಿ ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ (ತೋಟಗಾರಿಕೆ ಇಲಾಖೆ ದಿನಗೂಲಿ ನೌಕರರನ್ನೊಳಗೊಂಡ) ದಿನಗೂಲಿ ನೌಕರರುಗಳು ತಮ್ಮನ್ನು ಸೇವೆಯಲ್ಲಿ ಖಾಯಂಗೊಳಿಸುವಂತೆ ಕೋರಿ ಘನ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 6961:2000 ರಿಂದ 6963:2000, 6965:2000 ಮತ್ತು 6967:2000ನ್ನು ದಾಖಲಿಸಿದ್ದರು. ಶ್ರೀ ಜೆ. ಭೀಮಸೇನ್ ಮತ್ತು ಶ್ರೀ ಬಸವರಾಜ್ ಮತ್ತಿತರ 160 ದಿನಗೂಲಿ ನೌಕರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 11862:98, 39117-196:99 ಮತ್ತು ರಿಟ್ ಅಪೀಲು ಸಂಖ್ಯೆ: 7095:2000, 5697:2000ರ ರಿಟ್ ಅಪೀಲುಗಳಲ್ಲಿ ಅರ್ಜಿದಾರರ ಸೇವಾ ಸಕ್ರಮಾತಿ ಬಗ್ಗೆ ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸಿರುವುದಿಲ್ಲವೆಂದು ನ್ಯಾಯಾಲಯದಲ್ಲಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 659:2005 ಮತ್ತು 761:2005ನ್ನು ದಾಖಲಿಸಿರುತ್ತಾರೆ. ಸದರಿ ನ್ಯಾಯಾಲಯದ ನಿಂದನಾ ಅರ್ಜಿಗಳಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯದರ್ಶಿಗಳನ್ನು ಪ್ರತಿವಾದಿಗಳನ್ನಾಗಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ವಿವಿಧ ಇಲಾಖೆಗಳು ಪ್ರತಿವಾದಿಗಳಾಗಿದ್ದು, ರಿಟ್ ಅಪೀಲ್ ಮತ್ತು ಎಸ್.ಎಲ್.ಪಿ. ಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಹೆಸರಿನಲ್ಲಿ ಸಲ್ಲಿಸಿದ್ದು, ಈ ಎಸ್.ಎಲ್.ಪಿ. (ಸಿವಿಲ್)ನ್ನು ಘನ ಭಾರತ ಸರ್ವೋಚ್ಚ ನ್ಯಾಯಾಲಯವು ದಿನಾಂಕ: 21.7.2005 ರಂದು ವಜಾ ಮಾಡಿದ ಕಾರಣ, ಈ ನ್ಯಾಯಾಲಯ ನಿಂದನಾ ಅರ್ಜಿಗಳಲ್ಲಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಪರಿಶೀಲಿಸಲಾಗಿದೆ. ಸರ್ವೋಚ್ಚ ನ್ಯಾಯಾಲಯದ ಮುಂದೆ ಬಾಕಿ ಇರುವ ದಿನಗೂಲಿ ನೌಕರರ ಸೇವಾ ಸಕ್ರಮದ ಬಗೆಗಿನ ಸಾಮಾನ್ಯ ವಿಷಯದಲ್ಲಿ ಐವರು ನ್ಯಾಯಾಧೀಶರ ಪೀಠವು ಪುನರ್ ವಿಚಾರಣೆಗೆ ಒಳಪಡಿಸಿರುವ ನಾಲ್ಕು ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ರೆವ್ಯೂ ಅರ್ಜಿ ಸಲ್ಲಿಸುವ ಬಗ್ಗೆ ಪರಿಶೀಲಿಸಲಾಯಿತು. ನಿಂದನಾ ಅರ್ಜಿದಾರರಿಗೆ ಸಂಬಂಧಿಸಿದಂತೆ ಒಂದು ಸ್ಕೀಮ್ ತಯಾರಿಸಿ ದಿನಗೂಲಿ ನೌಕರರ ಸೇವಾ ಸಕ್ರಮ ಕುರಿತಂತೆ ಈ ಹಿಂದೆ ಹೊರಡಿಸಿದ್ದ ಆದೇಶದನ್ವಯ ಪರಿಶೀಲಿಸಲು ತೀರ್ಮಾನಿಸಿದೆ. ಅದರನ್ವಯ 10 ವರ್ಷಗಳ ಸತತ ಸೇವೆ ಸಲ್ಲಿಸಿರುವ ಈ ಅರ್ಜಿದಾರರನ್ನು ಮೂಲ ದಾಖಲೆಗಳ ಪರಿಶೀಲನೆ ನಂತರ ಸಕ್ರಮಗೊಳಿಸಲು ಸರ್ಕಾರವು ಅನುಮೋದಿಸಿದೆ.

ತೋಟಗಾರಿಕೆ ಇಲಾಖೆಯಲ್ಲಿ "ಡಿ" ಗ್ರೂಪ್‌ನ ಅನೇಕ ಹುದ್ದೆಗಳು ಖಾಲಿ ಇದ್ದರೂ, ಸಹ ಸರ್ಕಾರದ ಆದೇಶಗಳ ಅನುಸಾರ ಜಿಲ್ಲಾಧಿಕಾರಿಗಳು ಮಾತ್ರ ಖಾಲಿ ಹುದ್ದೆಗಳಿಗೆ ಮರು ಹಂಚಿಕೆ ಮಾಡುವ ಅಧಿಕಾರ ಹೊಂದಿರುತ್ತಾರೆ. ಆದ್ದರಿಂದ ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಿಗೆ ನೇಮಕಾತಿ ಪ್ರಾಧಿಕಾರಿಗಳೇ ಇವರನ್ನು ನೇಮಕ ಮಾಡಲು ಅವಕಾಶವಿಲ್ಲ. ಈ ಹಿನ್ನೆಲೆಯಲ್ಲಿ ಐದು ಸೂಪರ್ ನ್ಯೂಮರರಿ ಹುದ್ದೆ ಸೃಷ್ಟಿಸಿ, ಸದರಿ ಹುದ್ದೆಗೆ ಇವರನ್ನು ಸಕ್ರಮಗೊಳಿಸಿ ತೀರ್ಮಾನಿಸಿದೆ. ನಂತರ ಇವರ ಹೆಸರನ್ನು ಜಿಲ್ಲಾಧಿಕಾರಿಗಳು, ಕೋಲಾರ ಇವರಿಗೆ ಕಳುಹಿಸಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗೆ ಮರು ವಿನ್ಯಾಸಗೊಳಿಸಲು ಕೋರಬಹುದಾಗಿದೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 125 ತೋಕಾವಿ 2004, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ದಿನಾಂಕ: 1.7.84ರ ನಂತರ ನೇಮಕಗೊಂಡು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ಕೋರಿ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಿದ್ದ ಅರ್ಜಿದಾರರಾದ ಶ್ರೀ ಹೆಚ್.ವಿ. ಶ್ರೀನಿವಾಸ ಬಿನ್ ವೆಂಕಟಪ್ಪ, ಶ್ರೀ ಮರಿಯಪ್ಪ ಬಿನ್ ಪಾಪಣ್ಣ, ಶ್ರೀ ಎಂ. ನಾಗರಾಜ್ ಬಿನ್ ಮುದ್ದೆಗೌಡ, ಶ್ರೀ ಎಂ. ಶ್ರೀರಾಮಪ್ಪ ಬಿನ್ ಎಂ. ಮುನಿಗಂಗಪ್ಪ ಮತ್ತು ಶ್ರೀ ಎನ್. ಶಿವಣ್ಣ ಬಿನ್ ಚಿಕ್ಕನಂಜಪ್ಪ, ಸದರಿ ಐದು ಮಂದಿ ದಿನಗೂಲಿ ನೌಕರರನ್ನು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ದಿನಾಂಕ: 6.8.90ರ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಲ್‌ಸಿ 90, ದಿನಾಂಕ: 23.11.95ರ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಲ್‌ಸಿ 95 ಮತ್ತು ದಿನಾಂಕ: 22.9.98ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಎಲ್‌ಸಿ 98ರ ಸೂಚನೆಗಳ ಪ್ರಕಾರ ಐದು "ಡಿ" ಗ್ರೂಪ್ ಸೂಪರ್ ನ್ಯೂಮರರಿ ಹುದ್ದೆಯನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಸೂಪರ್ ನ್ಯೂಮರರಿ ಹುದ್ದೆಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಹಿನ್ನೆಲೆಯಲ್ಲಿ ಸರ್ಕಾರದಿಂದ ಹೊರಡಿಸಲಾಗಿರುವ ಎಲ್ಲಾ ಸ್ಥಾಯಿ ಆದೇಶಗಳು, ಮಾರ್ಗಸೂಚಿಗಳು ಹಾಗೂ ಇತರೆ ಸೂಚನೆಗಳ ಅನುಗುಣವಾಗಿ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ಈ ಸೂಪರ್ ನ್ಯೂಮರರಿ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು.

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 250 ಜಿಪಅ 2005, ದಿನಾಂಕ: 16.12.2005 ಹಾಗೂ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 12.12.2005 ರಂದು ನಡೆದ ಸಭೆಯ ನಡವಳಿಗಳಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 57

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಎಸ್.ಎ. ಕಮಲ, ಪ್ರಾಧ್ಯಾಪಕರು, ಜೈನಾಗಮ ವಿಭಾಗ, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು ಇವರಿಗೆ ಕನ್ನಡ ಭಾಷಾ ಪರೀಕ್ಷೆ ಪಾಸು ಮಾಡಿರುವುದರಿಂದ ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 34 ಸೇಸೇನಿ 1997, ದಿನಾಂಕ: 03.11.2000 ಮತ್ತು ದಿನಾಂಕ: 12.09.2001.

2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ/2/ಸಿಆರ್/46/1997-98 ದಿನಾಂಕ: 15.07.2003 ಮತ್ತು 19.02.2005.

**ಪ್ರಸ್ತಾವನೆ:**

ಶ್ರೀಮತಿ ಎಸ್.ಎ. ಕಮಲ ಜೈನಾಗಮ ಪ್ರಾಧ್ಯಾಪಕರು, ಸರ್ಕಾರಿ ಸಂಸ್ಕೃತ ಕಾಲೇಜು, ಮೈಸೂರು ರವರು ದಿನಾಂಕ: 11.03.1987 ರಂದು ವೇತನ ಶ್ರೇಣಿ ರೂ.1200-2175ರ ಮೇರೆ ಜೈನಾಗಮ ಪ್ರಾಧ್ಯಾಪಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಜೈನಾಗಮ ಪ್ರಾಧ್ಯಾಪಕರ ಹುದ್ದೆಗೆ ಯಾವುದೇ ಇಲಾಖಾ ಪರೀಕ್ಷೆಗಳನ್ನು ನಿಗದಿಪಡಿಸಿರುವುದಿಲ್ಲ. ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳ) ನಿಯಮಗಳು 1974ರ ನಿಯಮ 3(1)(i)ರ ಪ್ರಕಾರ ಪ್ರತಿ ಒಬ್ಬ ಸರ್ಕಾರಿ ನೌಕರನು ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣರಾಗುವುದು ಕಡ್ಡಾಯವಾಗಿರುತ್ತದೆ. ಶ್ರೀಮತಿ ಎಸ್.ಎ. ಕಮಲರವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಸದರಿಯವರಿಗೆ ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳ) ನಿಯಮಗಳು 1974ರ ನಿಯಮ 5(5)ರ ಪ್ರಕಾರ ಕನ್ನಡ ಭಾಷಾ ಪರೀಕ್ಷೆಯನ್ನು ಉತ್ತೀರ್ಣರಾಗುವುದರಿಂದ ವಿನಾಯಿತಿ ನೀಡಲಾಗಿದೆ. ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಸುತ್ತೋಲೆ ದಿನಾಂಕ: 03.11.2000 ರನ್ವಯ ದಿನಾಂಕ: 10.01.1974 ರಿಂದ 02.09.1987 ರವರೆಗೆ ಸೇವೆಗೆ ಸೇರಿದ್ದು, ಈ ಅವಧಿಯಲ್ಲಿ ಕಡ್ಡಾಯಗೊಳಿಸಲಾದ ಕನ್ನಡ ಭಾಷಾ ಪರೀಕ್ಷೆ ಮತ್ತು ಸಂಬಂಧಿಸಿದ ವೃಂದಕ್ಕೆ ನಿಗದಿಪಡಿಸಲಾದ ಸೇವಾ ಪರೀಕ್ಷೆಗಳಲ್ಲಿ ತೇರ್ಗಡೆಯಾದಂತಹ ಪ್ರತಿಯೊಬ್ಬ ಸರ್ಕಾರಿ ನೌಕರರಿಗೂ ಸದರಿ ನಿಯಮಾವಳಿ ನಿಯಮ 6ರ ಅವಕಾಶಗಳನುಸಾರ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ನೀಡಬಹುದಾಗಿರುತ್ತದೆ. ಸದರಿ ಸುತ್ತೋಲೆ ಅನುಸಾರ ಶ್ರೀಮತಿ ಎಸ್.ಎ. ಕಮಲ ಪ್ರಾಧ್ಯಾಪಕರು ರವರು ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣರಾಗುವುದರಿಂದ ವಿನಾಯಿತಿ ಪಡೆದಿದ್ದು, ಜೈನಾಗಮ ಪ್ರಾಧ್ಯಾಪಕರ ಹುದ್ದೆಗೆ ಯಾವುದೇ ಸೇವಾ ಪರೀಕ್ಷೆಗಳನ್ನು ನಿಗದಿಪಡಿಸದೇ ಇರುವುದರಿಂದ ಸದರಿಯವರು ಸೇವೆಗೆ ಸೇರಿದ ದಿನಾಂಕ: 11.03.1987 ರಿಂದ ಅನ್ವಯವಾಗುವಂತೆ ಹೆಚ್ಚುವರಿ ವಾರ್ಷಿಕ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರಗಳಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 149 ಮುಸೇವಿ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಜೈನಾಗಮ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಎಸ್.ಎ. ಕಮಲ, ಪ್ರಾಧ್ಯಾಪಕರು ಇವರಿಗೆ ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳ) ನಿಯಮಗಳು 1974ರ ನಿಯಮ 6ರ ಪ್ರಕಾರ ದಿನಾಂಕ: 11.03.1987 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.1200-2175 ರಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಸಿ.ಆ.ಸು.ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ/1068/ಸೇನಿಎ/2005, ದಿನಾಂಕ: 19.07.2005 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/848/ವೆಚ್ಚ-7/2005, ದಿನಾಂಕ: 01.10.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 38 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**ವಿಷಯ:** ಬೆಳಗಾವಿ ತಾಲ್ಲೂಕು, ವಡಗಾಂವ ಶ್ರೀ ಮಲ್ಲಿಕಾರ್ಜುನ ದೇವಸ್ಥಾನವನ್ನು ಮತ್ತು ಗೋಕಾಕ ಶ್ರೀ ಮಾಹುರಾಯಿ ಹಾಗೂ ಅಂಬಾಬಾಯಿ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 7 ಮುಸೇವಿ 2003, ದಿನಾಂಕ: 30.04.2004.

2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/61/2003-04, ದಿನಾಂಕ: 29.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಬೆಳಗಾವಿ ತಾಲ್ಲೂಕು, ವಡಗಾಂವ ಶ್ರೀ ಮಲ್ಲಿಕಾರ್ಜುನಸ್ವಾಮಿ ಮತ್ತು ಗೋಕಾಕ ಶ್ರೀ ಮಾಹುರಾಯಿ (ರೇಣುಕಾ) ಹಾಗೂ ಅಂಬಾಬಾಯಿ ದೇವಸ್ಥಾನಗಳನ್ನು ಕ್ರಮವಾಗಿ ಕುರುಹಿನಶೆಟ್ಟಿ ಸಮಾಜ ಮತ್ತು ಸೋಮವಂಶ ಸಹಸ್ರಾರ್ಜುನ ಕ್ಷತ್ರೀಯ ಸಮಾಜಕ್ಕೆ ಸೇರಿರುವುದಾಗಿ ಧರ್ಮದತ್ತಿ ಆಯುಕ್ತರ ಕಛೇರಿ, ಬೆಳಗಾವಿ ಇವರು ವರದಿ ಆಧಾರದ ಮೇಲೆ ಎರಡು ದೇವಸ್ಥಾನಗಳನ್ನು ದತ್ತಿಗಳ ಅಧಿನಿಯಮದನ್ವಯ ವಿನಾಯಿತಿಗೊಳಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈ ಬಿಡಲು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 18 ಮುಅಬಿ 2004, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003 ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕು, ಬೆಳಗಾವಿ ಶ್ರೀ ಮಲ್ಲಿಕಾರ್ಜುನ

ದೇವಸ್ಥಾನ ಕ್ರಮ ಸಂಖ್ಯೆ: 6, ಪುಟ ಸಂಖ್ಯೆ: 139 ಮತ್ತು ಗೋಕಾಕ್ ತಾಲ್ಲೂಕು, ಗೋರ್ಕರ್ಣ ಶ್ರೀ ಮಹಾರಾಯ ಅಂಬಾಬಾಯಿ ದೇವಸ್ಥಾನ ಕ್ರಮ ಸಂಖ್ಯೆ: 18, ಪುಟ ಸಂಖ್ಯೆ: 152 ಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 40

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಯು.ಜಿ. ಹಾಸ್ಟೆಲ್‌ನ ಹಣದುರುಪಯೋಗ ಸಂಬಂಧ ಶಿಸ್ತುಕ್ರಮಕ್ಕಾಗಿ ರೋಗಲಕ್ಷಣಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ಹೆಚ್.ಟಿ. ಚಿದಾನಂದ ಮತ್ತು ದ್ವಿ.ದ.ಸ. ಶ್ರೀ ಸುಬ್ಬಯ್ಯರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕೈಬಿಡುವ ಕುರಿತು.

**ಓದಲಾಗಿದೆ:**
1) ದಿನಾಂಕ: 04.04.2000, 20.02.2004 ಹಾಗೂ 04.03.2005 ಸುತ್ತೋಲೆ: ಡಿಪಿಜಿ(ವೈಶಿ)1/97-98 ಈ ವೈದ್ಯಕೀಯ ಶಿಕ್ಷಣ ನಿಯಮರವರ ಪ್ರಕಾರ.
2) ದಿನಾಂಕ: 29.01.1996ರ ಹರಿಹರನ್ ಮತ್ತು ಕಂಪನಿಯವರ ಆಡಿಟ್ ವರದಿ.
3) ದಿನಾಂಕ: 02.05.2005 ಸುತ್ತೋಲೆ: ಆಕುಕ 141 ಎಂಎಂಸಿ 2005ರ ಸರ್ಕಾರಿ ಆದೇಶ.
4) ದಿನಾಂಕ: 02.05.2005ರ ಸುತ್ತೋಲೆ: ಆಕುಕ 141 ಎಂಎಂಸಿ 2004ರ ಸರ್ಕಾರಿ ಆದೇಶ.
5) ದಿನಾಂಕ: 20.12.2004 ಹಾಗೂ 18.07.2005ರ ಡಾ: ಚಿದಾನಂದರವರ ಹೇಳಿಕೆ.
6) ದಿನಾಂಕ: 28.07.2005 ಸುತ್ತೋಲೆ ವಿಚಾರಣೆ/ವಿವ/161/05-06ರ ಮೈವೈಕಾನ ಪ್ರಾಂಶುಪಾಲರ ಹೇಳಿಕೆ.
7) ದಿನಾಂಕ: 27.09.2005ರ ಸುತ್ತೋಲೆ: ತಖೆ/80/2004-05ರ ಮೈವೈಕಾನ ದೃಢೀಕರಣ ಪತ್ರ.

**ಪ್ರಸ್ತಾವನೆ:**

ಮೈಸೂರು ವೈದ್ಯಕೀಯ ಕಾಲೇಜಿನ ಯು.ಜಿ. ಹಾಸ್ಟಲ್‌ನಲ್ಲಿ 1,59,366 ರೂ.ಗಳು ದುರುಪಯೋಗವಾಗಿದೆಯೆಂಬ ಆಡಿಟ್ ವರದಿಯನ್ನು ಆಧರಿಸಿ ಮೈಸೂರು ವೈದ್ಯಕೀಯ ಕಾಲೇಜಿನ ರೋಗ ಲಕ್ಷಣ ಶಾಸ್ತ್ರ ಪ್ರಾಧ್ಯಾಪಕರು ಮತ್ತು ಹಾಸ್ಟಲ್ ವಾರ್ಡನ್ ಆಗಿದ್ದ ಡಾ: ಹೆಚ್.ಟಿ. ಚಿದಾನಂದ ಮತ್ತು ದ್ವಿ.ದ.ಸ. ರಾದ ಶ್ರೀ ಡಬ್ಲ್ಯೂ.ಎಂ. ಸುಬ್ಬಯ್ಯರವರುಗಳ ವಿರುದ್ಧ 1957ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ 13ನೇ ನಿಯಮದಡಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಉಲ್ಲೇಖ (4) ರಲ್ಲಿ ತಿಳಿಸಲಾದ ಆದೇಶದಲ್ಲಿ ಆದೇಶಿಸಲಾಗಿತ್ತು. ನಂತರ ಅವರುಗಳ ವಿರುದ್ಧ ದೋಷಾರೋಪಣೆ ಇತ್ಯಾದಿಗಳನ್ನು ದಿನಾಂಕ: 02.05.2005ರ ನೋಟೀಸ್‌ನಲ್ಲಿ ಜಾರಿಗೊಳಿಸಿ 15 ದಿನಗಳ ಅವಧಿಯಲ್ಲಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು. ಡಾ: ಹೆಚ್.ಟಿ. ಚಿದಾನಂದರವರು ದೋಷಾರೋಪಣೆಯನ್ನು ನಿರ್ದಿಷ್ಟವಾಗಿ ನಿರಾಕರಿಸಿದ್ದರು. ಸದರಿ ಮೊತ್ತವನ್ನು ಹಾಸ್ಟಲ್ ಲೆಕ್ಕಪತ್ರವನ್ನು ನಿರ್ವಹಿಸುತ್ತಿದ್ದ ಡಬ್ಲ್ಯೂ.ಎಂ. ಸುಬ್ಬಯ್ಯರವರು ದುರುಪಯೋಗ ಮಾಡಿದ್ದಾರೆಂದು ತಿಳಿಸಿದರು. ಅಲ್ಲದೇ ಅವರು ಗೌರವಾನ್ವಿತ ವಾರ್ಡನ್ ಆಗಿದ್ದರಿಂದ ಹಾಸ್ಟಲ್ ಹಣದ ದುರುಪಯೋಗಕ್ಕೆ ಅವರು ಜವಾಬ್ದಾರರಲ್ಲವೆಂದು ತಿಳಿಯಪಡಿಸಿದೆ.

ಶ್ರೀ ಡಬ್ಲ್ಯೂ.ಎಂ. ಸುಬ್ಬಯ್ಯರವರು ಸಲ್ಲಿಸಿದ್ದ ರಕ್ಷಣಾ ಹೇಳಿಕೆಯಲ್ಲಿ 71,000 ರೂ.ಗಳ ಬಿಲ್ಲುಗಳಿಗೆ ಪಾವತಿ ಮಾಡಲಾಗಿದ್ದು, ಅದನ್ನು ಕಡಿತಗೊಳಿಸಿ ಇನ್ನುಳಿದ 88,363 ರೂ.ಗಳನ್ನು 45 ದಿನಗಳಲ್ಲಿ ಪಾವತಿ ಮಾಡುವುದಾಗಿ ತಿಳಿಸಿದ್ದರು. ನಂತರ ಅವರು 59,363 ಮತ್ತು 50,000 ರೂ.ಗಳ ಮೂರು ತಾ: 30.07.2005, 25.08.2005 ಮತ್ತು 15.09.2005 Post Dated ಚೆಕ್ಕುಗಳನ್ನು ಸಲ್ಲಿಸಿ ಡಾ: ಹೆಚ್.ಟಿ. ಚಿದಾನಂದರವರ ಯಾವುದೇ ಪಾತ್ರ ಇಲ್ಲವೆಂದು ಸಂಪೂರ್ಣ ಜವಾಬ್ದಾರಿಯನ್ನು ಡಬ್ಲ್ಯೂ.ಎಂ. ಸುಬ್ಬಯ್ಯರವರೇ ಹೊತ್ತಿರುವುದರಿಂದ ಜಂಟಿ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ದೋಷಾರೋಪಣೆಯಿಂದ ಮುಕ್ತಗೊಳಿಸುವಂತೆ ಕೋರಿದ್ದರು. ನಂತರದ ಬೆಳವಣಿಗೆಯಲ್ಲಿ ತಾ: 27.08.2005ರ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರ ಪತ್ರದಲ್ಲಿ ಡಾ: ಹೆಚ್.ಟಿ. ಚಿದಾನಂದರವರ ಪಾತ್ರ ಏನೂ ಇಲ್ಲದೇ ಇರುವುದರಿಂದ ಅವರನ್ನು ದೋಷಮುಕ್ತಗೊಳಿಸುವಂತೆ ಶಿಫಾರಸ್ಸು ಮಾಡಲಾಗಿತ್ತು. ತಾ: 27.09.2005ರ ಮೈಸೂರು ವೈದ್ಯಕೀಯ ಕಾಲೇಜಿನ ದೃಢೀಕರಣ ಪತ್ರದಲ್ಲಿ ಡಬ್ಲ್ಯೂ.ಎಂ. ಸುಬ್ಬಯ್ಯರವರವರಿಂದ 1,59,363 ರೂ.ಗಳು ಮೈಸೂರು ವೈದ್ಯಕೀಯ ಕಾಲೇಜಿನ ಆವರಣದಲ್ಲಿರುವ ಎಸ್.ಬಿ.ಎಂ. ನಲ್ಲಿ ಜಮಾ ಮಾಡಲಾಗಿದೆ ಎಂದು ತಿಳಿಸಿ ಬ್ಯಾಂಕಿನ ದೃಢೀಕರಣ ಪತ್ರವನ್ನೂ ಸಹ ಒದಗಿಸಿದ್ದಾರೆ. ಹಾಸ್ಟೆಲ್‌ನ ವಾರ್ಡನ್ ಸಹಾ ದೃಢೀಕರಿಸಿದ್ದಾರೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ದ್ವಿತೀಯ ದರ್ಜೆ ಸಹಾಯಕರಾದ ಶ್ರೀ ಡಬ್ಲ್ಯೂ.ಎಂ. ಸುಬ್ಬಯ್ಯರವರು ಹಣ ದುರುಪಯೋಗದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿದೆ. ಮತ್ತು ಡಾ: ಹೆಚ್.ಟಿ. ಚಿದಾನಂದರವರ ಹೇಳಿಕೆಯನ್ನು ಗಮನಿಸಲಾಗಿದೆ. ಈ ದಿಸೆಯಲ್ಲಿ ಮುಂದಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 141 ಎಂಎಂಸಿ 2004, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2005**

ಸಕಲ ವಲಯಗಳಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ ಡಾ: ಹೆಚ್.ಟಿ. ಚಿದಾನಂದ, ರೋಗಲಕ್ಷಣ ಶಾಸ್ತ್ರ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಡಬ್ಲ್ಯೂ.ಎಂ. ಸುಬ್ಬಯ್ಯ, ದ್ವಿತೀಯ ದರ್ಜೆ ಸಹಾಯಕ, ಮೈಸೂರು ವೈದ್ಯಕೀಯ ಕಾಲೇಜುರವರ ವಿರುದ್ಧ ನಡೆಸಲು ಉದ್ದೇಶಿಸಲಾಗಿದ್ದ ಜಂಟಿ ಇಲಾಖಾ ವಿಚಾರಣೆಯನ್ನು ಕೈಬಿಡಲು ಹಾಗೂ ಡಾ: ಹೆಚ್.ಟಿ. ಚಿದಾನಂದ, ರೋಗಲಕ್ಷಣ ಶಾಸ್ತ್ರ ಪ್ರಾಧ್ಯಾಪಕರು ಮೈಸೂರು ವೈದ್ಯಕೀಯ ಕಾಲೇಜು ಮೈಸೂರುರವರನ್ನು ದೋಷಮುಕ್ತರೆಂದು ಆದೇಶಿಸಿದೆ. ಶ್ರೀ ಡಬ್ಲ್ಯೂ.ಎಂ. ಸುಬ್ಬಯ್ಯರವರ ವಿರುದ್ಧ 1957ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ 11ನೇ ನಿಯಮದಡಿ ಇಲಾಖಾ ವಿಚಾರಣೆಯನ್ನು ನಡೆಸುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

ಪಿ.ಆರ್. 27